ಪ್ರಜಾವಾಣಿ
ಶುಕ್ರವಾರ • ಡಿಸೆಂಬರ್ 30, 2022



ನಗರದ ಮಲ್ಲೇಶ್ವರದಲ್ಲಿ ಕರ್ನಾಟಕ ರಕ್ಷಣಾ ವೇದಿಕೆ ಆಯೋಜಿಸಿದ್ದ ಕುವೆಂಪು ಜಯಂತ್ಯುತ್ಸವಕ್ಕೆ ... ಕಾರ್ಯಕ್ರಮದಲ್ಲಿ (ಕುಳಿತವರು ಎಡದಿಂದ) ಕನ್ನಡಪರ ಹೋರಾಟಗಾರರು ಪಾಲನೇತ್ರ, ಬೇಂದ್ರೆ ... ಕೃಷ್ಣಪ್ಪ ಮತ್ತು ರೆಫಾಯಲ್ ರಾಜ್ ಅವರನ್ನು ಸನ್ಮಾನಿಸಲಾಯಿತು. ರಾಜ್ಯಸಭಾ ಸದಸ್ಯ ಎಲ್. ... ಹನುಮಂತಯ್ಯ, ತುಮಕೂರು ಹಿರೇಮಠಾಧ್ಯಕ್ಷ ಶಿವಾನಂದ ಶಿವಾಚಾರ್ಯ ಸ್ವಾಮೀಜಿ, ಸಾಹಿತಿ ... ರಾಜಶೇಖರ ಮಠಪತಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಮತ್ತು ರಾಜ್ಯಾಧ್ಯಕ್ಷ ಎಚ್. ಶಿವರಾಮೇಗೌಡ ಇದ್ದಾರೆ —ಪ್ರಜಾವಾಣಿ ಚಿತ್ರ

ಉದಯವಾಣಿ ಗುರುವಾರ, ಡಿಸೆಂಬರ್ 29, 2022

# ಸಂಗೀತ, ಕಲೆ, ನೃತ್ಯ ಸಂಸ್ಕೃತಿ ಪ್ರೋತ್ಸಾಹಿಸಿ



ಶೇಷಾದ್ರಿಪುರಂ ಕಾಲೇಜಿನಲ್ಲಿ ನಡೆದ ರಾಷ್ಟ್ರೀಯ ಸಂಗೀತ ಮತ್ತು ನೃತ್ಯ ಹಬ್ಬದಲ್ಲಿ ಸಾಧಕ ಕಲಾವಿದರನ್ನು ಸನ್ಮಾನಿಸಲಾಯಿತು.

ಕೆಂಗೇರಿ: ಸಂಗೀತ, ಕಲೆ, ನೃತ್ಯ ಸಂಸ್ಕೃತಿಯನ್ನು ನಮ್ಮ ಮುಂದಿನ ಪೀಳಿಗೆಗೆ ಉಳಿಸಲು ಪ್ರೋತ್ಸಾಹಿಸಬೇಕು ಎಂದು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ನಾಡೋಜ ಡಾ|ವೂಡೇ ಪಿ.ಕೃಷ್ಣ ಸಲಹೆ ನೀಡಿದರು.

- ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ನಾಡೋಜ ಡಾ|ವೂಡೇ ಪಿ.ಕೃಷ್ಣ ಸಲಹೆ

ಕೆಂಗೇರಿ ಉಪನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ 'ನಾಟ್ಯ ಸನ್ನಿಧಿ ಭರತ ನಾಟ್ಯ ಕಲಾ ಕೇಂದ್ರ' ಮತ್ತು 'ನಾಟ್ಯ ಕಲಾಸಿರಿ ಸಾಂಸ್ಕೃತಿಕ ವೇದಿಕೆ' ಸಂಯುಕ್ತವಾಗಿ ಆಯೋಜಿಸಿದ್ದ ರಾಷ್ಟ್ರೀಯ ಸಂಗೀತ ಮತ್ತು ನೃತ್ಯ ಹಬ್ಬದ ಸಮಾರೋಪದ ಅಧ್ಯಕ್ಷತೆ ವಹಿಸಿ ಮಾತನಾಡಿದರು. ಭಾವೈಕ್ಯತೆಯ ಸಂಕೇತವಾಗಿ ರಾಷ್ಟ್ರ ಮಟ್ಟದ ಹಬ್ಬವನ್ನು ಮೋನಿಷಾ ನವೀನ್ ಮತ್ತು ಸಂಗಡಿಗರು ಆಯೋಜಿಸಿರುವುದು ಅಭಿನಂದನೀಯ. ಭಾಷೆ ಯಾವುದಾದರೂ ಭಾವನೆ ಒಂದು ಎಂಬುದನ್ನು ಅವರು ಪ್ರಚುರ ಪಡಿಸಿದ್ದಾರೆ ಎಂದರು.

ಗ್ರೇನ್ ಮರ್ಚೆಂಟ್ ಕೋ ಆಪರೇಟಿವ್ ಬ್ಯಾಂಕ್ ನಿರ್ದೇಶಕಿ ಮಾಲಿನಿ ವಾಸುದೇವ್, ಸಂಗೀತವನ್ನು ಇಷ್ಟ ಪಟ್ಟು ಕಲಿತು ಆರಾಧಿಸಿದರೆ ನಿಮಗೆ ಒಲಿಯುವುದು ಎಂದರು.

ಸಮಾರಂಭದಲ್ಲಿ ತಿರುಪತಿ, ವಿಜಯವಾಡ, ಹೈದರಾಬಾದ್, ಚೆನ್ನೈ ಸೇರಿದಂತೆ ವಿವಿಧ ಭಾಗಗಳಿಂದ ಆಗಮಿಸಿದ್ದ ಕಲಾವಿದರು ಹಲವು ನೃತ್ಯ ಪ್ರದರ್ಶಿಸಿ ಗಮನ ಸೆಳೆದರು. ವೇದಿಕೆಯಲ್ಲಿ ಶೇಷಾದ್ರಿಪುರಂ ಪದವಿ ಕಾಲೇಜಿನ ಪ್ರಾಂಶುಪಾಲ ಪ್ರೊ. ಜಯರಾಮು, ವಚನಜ್ಯೋತಿ ಬಳಗದ ಪಿನಕಾಪಾಣಿ ನಾಟ್ಯ ಕುಸುಮಾಂಜಲಿಯ ಕಾರ್ಯದರ್ಶಿ ಶ್ರೀನಾಥ್ ಜೋಯಿಸ್, ಕಲ್ಪತರು ಸಾಮಾಜಿಕ-ಸಾಂಸ್ಕೃತಿಕ ಮತ್ತು ಕ್ರೀಡಾ ಸಂಘದ ಸಂಸ್ಥಾಪಕ ಅಧ್ಯಕ್ಷ ಎನ್.ಎಸ್.ಸುಧೀಂದ್ರ ರಾವ್, ಲೇಪಾಕ್ಷಿ ಸಂತೋಷ್ ರಾವ್, ಕನ್ನಡ ಪಾಷ, ನೃತ್ಯ ಗುರು ಡಾ|ಶರತ್ ಚಂದ್ರ, ಮೋಹಿನಿ, ಪದ್ಮ ಶರ್ಮಾ ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.

ಉದಯವಾಣಿ ಗುರುವಾರ, ಡಿಸೆಂಬರ್ 29, 2022

# ಶತ ಕಂಠಗಳ ಗಾಯನ, ಸಮೂಹ ನೃತ್ಯ



ಬೆಂಗಳೂರು: ಸಂಗೀತ ಮತ್ತು ನೃತ್ಯದಿಂದ ನಮ್ಮಲ್ಲಿರುವ ಮಾನಸಿಕ ಬಿಕ್ಕಟ್ಟನ್ನು ಹೊರಹಾಕಲು ಸಾಧ್ಯ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ.ಕೃಷ್ಣ ತಿಳಿಸಿದರು.

ನಗರದ ಮಲ್ಲೇಶ್ವರಂನ ಸೇವಾ ಸದನದ ಸಭಾಂಗಣದಲ್ಲಿ ಬುಧವಾರ ರಂಗ ಸಂಸ್ಥಾನದ ವತಿಯಿಂದ ಆಯೋಜಿಸಿದ್ದ ಶತ ಕಂಠಗಳ ಗಾಯನ ಹಾಗೂ ಸಮೂಹ ನೃತ್ಯ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ಅವರು, ಕಲೆಯನ್ನು ತಮ್ಮಲ್ಲಿ ಜೀವಂತವಾಗಿಸಿರಿಕೊಂಡವರು ಯಾವುದೇ ಒತ್ತಡವಿಲ್ಲದೇ, ಲವಲವಿಕೆಯಿಂದ ಇರುತ್ತಾರೆ ಎಂದರು.

ಮಕ್ಕಳನ್ನು ಸಂಗೀತ-ನೃತ್ಯಗಳಲ್ಲಿ ಹೆಚ್ಚು ತೊಡಗಿಸುವುದರಿಂದ ಅವರ ಮುಂದಿನ ಬದುಕಿನಲ್ಲಿ ನೆಮ್ಮದಿ ಹಾಗೂ ಸಂವೇದನ ಶೀಲತೆಯನ್ನು ಬೆಳೆಸಲು ಸಹಕಾರಿಯಾಗುತ್ತದೆ. ಅಲ್ಲದೇ, ಸಮೂಹ ಗಾಯನ ಅಥವಾ ನೃತ್ಯದಲ್ಲಿ ಭಾಗವಹಿಸಿದಾಗ ಮಾತ್ರ ಒಬ್ಬರು ಮತ್ತೊಬ್ಬರನ್ನು ಅರ್ಥೈಸಿಕೊಳ್ಳುವ ಮೂಲಕ ಎಲ್ಲರೂ ಸಮನ್ವಯದಿಂದ ಗಾಯನ ಅಥವಾ ನೃತ್ಯವನ್ನು ಪ್ರದರ್ಶಿಸಲು ಸಾಧ್ಯವಾಗುತ್ತದೆ ಎಂದು ಹೇಳಿದರು.

ಇದೇ ಸಂದರ್ಭದಲ್ಲಿ ಮಾತನಾಡಿದ ಬೇಲಿಮಠ ಮಹಾಸಂಸ್ಥಾನದ ಶಿವರುದ್ರ ಸ್ವಾಮೀಜಿ ಅವರು, ಸಂಗೀತ ಎಂಬುದು ಅಂತರಂಗದ ಶಕ್ತಿ. ಸ್ವರ, ರಾಗ ನಮ್ಮ ಮನಸ್ಸಿನಲ್ಲಿರುವ ಗೊಂದಲಗಳನ್ನು ಹೊರಹಾಕಿ, ಮನಸ್ಸನ್ನು ಶಾಂತಿಗೊಳಿಸುತ್ತದೆ. ಜತೆಗೆ ತನ್ನದೇ ಆದ ಕಲ್ಪನೆಗೆ ಕರೆದೊಯ್ಯುತ್ತದೆ. ಎಲ್ಲರೂ ಒಂದಾಗಿ ಕನ್ನಡದ ಸಿರಿಯನ್ನು ಹೆಚ್ಚಿಸುವ ಕೆಲಸ ಮಾಡಬೇಕು ಎಂದು ಹೇಳುತ್ತಾ, ಆಶೀರ್ವಚನ ನೀಡಿದರು.

ವಾಣಿ
29 Dec 2022 - Page 6

# 'ಸಂಗೀತ, ಕಲೆ, ನೃತ್ಯ ಸಂಸ್ಕೃತಿಯನ್ನು ಮುಂದಿನ ಪೀಳಿಗೆಗೆ ಉಳಿಸಿ'



ಬೆಂಗಳೂರು

ಸಂಗೀತ, ಕಲೆ, ನೃತ್ಯ ಸಂಸ್ಕೃತಿಯನ್ನು ನಮ್ಮ ಮುಂದಿನ ಪೀಳಿಗೆಗೆ ಉಳಿಸಿ ಸಂರಕ್ಷಣೆ ಮಾಡುವ ಕಾರ್ಯವನ್ನು ಮಾಡಬೇಕು ಎಂದು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌ. ಕಾರ್ಯದರ್ಶಿ ಹಾಗೂ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ ಕೃಷ್ಣ ಹೇಳಿದರು.

ಅವರು ನಾಟ್ಯ ಸನ್ನಿಧಿ ಭರತ ನಾಟ್ಯ ಕಲಾ ಕೇಂದ್ರ ಮತ್ತು ನಾಟ್ಯ ಕಲಾಸಿರಿ ಸಾಂಸ್ಕೃತಿಕ ವೇದಿಕೆ ಸಂಯುಕ್ತವಾಗಿ ಆಯೋಜಿಸಿದ್ದ ರಾಷ್ಟ್ರೀಯ ಸಂಗೀತ ಮತ್ತು ನೃತ್ಯ ಹಬ್ಬದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿ ಸಂಗೀತ, ನೃತ್ಯ, ಕಲೆ, ಸಂಸ್ಕೃತಿಯು ನಮ್ಮ ಹಿರಿಯರು ನಮಗೆ ನೀಡಿದ ಮಹತ್ತರ ಕೊಡುಗೆಯಾಗಿದೆ ಎಂದರು. ಮಾನಸಿಕ ಚಿಂತೆಯನ್ನು ಹೋಗಲಾಡಿಸುವ ಶಕ್ತಿ ಇವಕ್ಕೆ ಇದೆ ಎಂದರು.

ಗ್ರೀನ್ ಮರ್ಚೆಂಟ್ ಕೋ ಆಪರೇಟಿವ್ ಬ್ಯಾಂಕ್ ನಿರ್ದೇಶಕಿ ಹಾಗೂ ಆಲ್ ಇಂಡಿಯಾ ಬ್ರಾಹ್ಮಿನ್ ಫೆಡರೇಷನ್ ಉಪಾಧ್ಯಕ್ಷೆ ಮಾಲಿನಿ ವಾಸುದೇವ್ ಮುಖ್ಯ ಅತಿಥಿಯಾಗಿ ಪಾಲ್ಗೊಂಡು ಮಾತನಾಡಿ ನೋಡತಕ್ಕ ಕಲೆಯಾಗಿದೆ ಎಂದರು. ಸಂಗೀತಕ್ಕೆ ಯಾವುದೇ ಜಾತಿ ಮತವೆಂಬ ಭೇದಭಾವವಿಲ್ಲ, ಇಷ್ಟ ಪಟ್ಟು ಕಷ್ಟ ಪಟ್ಟು ಕಲಿತು ಆರಾಧಿಸಿದರೆ ನಮಗೆ ಒಲಿಯುವುದು ಎಂದರು. ಭಾವೈಕ್ಯತೆಯ ಸಂಕೇತವಾಗಿ ರಾಷ್ಟ್ರ ಮಟ್ಟದ ಹಬ್ಬವನ್ನು ಮೋನಿಷಾ ನವೀನ್ ಮತ್ತು ಸಂಗಡಿಗರು ಆಯೋಜಿಸಿರುವುದು ಅಭಿನಂದನೀಯ. ಭಾಷೆ ಯಾವುದಾದರು ಭಾವನೆ ಒಂದು ಎಂಬುದನ್ನು ಅವರು ಪ್ರಚುರ ಪಡಿಸಿದ್ದಾರೆ ಎಂದರು.

ಸಮಾರಂಭದಲ್ಲಿ ತಿರುಪತಿ, ವಿಜಯವಾಡ, ಹೈದರಾಬಾದ್,ಚೆನ್ನೈ ಸೇರಿದಂತೆ ವಿವಿಧ ಭಾಗಗಳಿಂದ ಬಂದ ಕಲಾವಿದರು ಪ್ರದರ್ಶನ ನೀಡಿದರು. ವಚನಜ್ಯೋತಿ ಬಳಗದ ಪಿನಕಾಪಾಣಿ ಕಾರ್ಯಕ್ರಮವನ್ನು ಉದ್ಘಾಟಿಸಿದರು.ಮುಖ್ಯ ಅತಿಥಿಗಳಾಗಿ ನಾಟ್ಯ ಕುಸುಮಾಂಜಲಿಯ ಕಾರ್ಯದರ್ಶಿ ಶ್ರೀನಾಥ್ ಜೋಯಿಸ್ ಹಿರಿಯ ಪತ್ರಕರ್ತರಾದ ಎಸ್ ಎಸ್ ಸುಧೀಂದ್ರ ರಾವ್, ಲೇಪಾಕ್ಷಿ ಸಂತೋಷ್ ರಾವ್, ಕನ್ನಡ ಪಾದ, ನೃತ್ಯ ಗುರು ಡಾ. ಶರತ್ ಚಂದ್ರ, ಪ್ರೊ. ಜಯರಾಮ,ಮೋಹಿನಿ, ಪದ್ಮ ಶರ್ಮಾ, ಸೇರಿದಂತೆ ಮತ್ತಿತರ ಗಣ್ಯರು ಪಾಲ್ಗೊಂಡಿದ್ದರು.

# ಇಂದಿನ ಕಾರ್ಯಕ್ರಮ

## ಸಂಯುಕ್ತ ಕರ್ನಾಟಕ

28-12-2022, ಬುಧವಾರ

ರಂಗ ಸಂಸ್ಥಾನ, ಶತ ಕಂಠಗಳ ಗಾಯನ ಹಾಗೂ ಸಮೂಹ ನೃತ್ಯ. ಬಡಾವಣೆಗಳಲ್ಲಿ ಸಾಂಸ್ಕೃತಿಕ ತರಬೇತಿ ಶಿಬಿರ. ಸಾನ್ನಿಧ್ಯ: ಶ್ರೀ ಶಿವರುದ್ರ ಮಹಾಸ್ವಾಮೀಜಿ.



ಉದ್ಘಾಟನೆ: ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ. ಅಧ್ಯಕ್ಷತೆ: ಬಿ.ಪಿ.ಪ್ರಕಾಶ್. ಮುಖ್ಯ ಅತಿಥಿ: ಆರ್.ಚಂದ್ರಶೇಖರ್. ಎನ್.ಎ.ಚಿದಂಬರ. ಸ್ಥಳ: ಮಲ್ಲೇಶ್ವರ, 14ನೇ ಅಡ್ಡರಸ್ತೆ, ಸೇವಾ ಸದನ. 10.30

## ಉದಯವಾಣಿ

ಬುಧವಾರ, ಡಿಸೆಂಬರ್ 28, 2022

ರಂಗ ಸಂಸ್ಥಾನ: ಶತ ಕಂಠಗಳ ಗಾಯನ ಮತ್ತು ಸಮೂಹ ನೃತ್ಯ. ಮುಖ್ಯ ಅತಿಥಿಗಳು: ಬೇಲಿಮಠ ಮಹಾಸಂಸ್ಥಾನದ ಶಿವರುದ್ರ ಸ್ವಾಮೀಜಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ.ಕೃಷ್ಣ. ಸ್ಥಳ: ಸೇವಾ ಸದನ, 14ನೇ ಅಡ್ಡರಸ್ತೆ, ಮಲ್ಲೇಶ್ವರಂ. ಬೆಳಗ್ಗೆ 10.30ಕ್ಕೆ.

## ಪ್ರಜಾವಾಣಿ

ಬುಧವಾರ • ಡಿಸೆಂಬರ್ 28, 2022

ಶತ ಕಂಠಗಳ ಗಾಯನ ಹಾಗೂ ಸಮೂಹ ನೃತ್ಯ: ಸಾನ್ನಿಧ್ಯ: ಶಿವರುದ್ರ ಸ್ವಾಮೀಜಿ, ಉದ್ಘಾಟನೆ: ವೂಡೇ. ಪಿ. ಕೃಷ್ಣ, ಅಧ್ಯಕ್ಷತೆ: ಬಿ.ಪಿ. ಪ್ರಕಾಶ್, ಅತಿಥಿಗಳು: ಆರ್. ಚಂದ್ರಶೇಖರ್, ಎನ್.ಎ. ಚಿದಂಬರ, ಎಸ್.ಎಲ್. ಕೃಷ್ಣಮೂರ್ತಿ, ಆಯೋಜನೆ: ರಂಗ ಸಂಸ್ಥಾನ, ಸ್ಥಳ: ಸೇವಾ ಸದನ, 14ನೇ ಅಡ್ಡರಸ್ತೆ, ಮಲ್ಲೇಶ್ವರ, ಬೆಳಿಗ್ಗೆ 10.30

ಪ್ರಜಾವಾಣಿ
ಭಾನುವಾರ ● ಡಿಸೆಂಬರ್ 25, 2022

# ‘ಚಲನಶೀಲತೆ ತಂದುಕೊಟ್ಟ ಹನುಮಂತಪ್ಪ’

ಬೆಂಗಳೂರು: ‘ಬ್ರಹ್ಮ ಸಮಾಜವನ್ನು ಕಟ್ಟಿ ಬೆಳೆಸಿದವರು ಡಬ್ಲ್ಯು.ಎಚ್.ಹನುಮಂತಪ್ಪ. ಜತೆಗೆ ಆ ಸಮಾಜಕ್ಕೆ ಸಾಂಸ್ಥಿಕ ರೂಪ ಹಾಗೂ ಚಲನಶೀಲತೆ ತಂದುಕೊಟ್ಟಿದ್ದರು’ ಎಂದು ಕರ್ನಾಟಕ ಸಂಸ್ಕೃತ ವಿಶ್ವ ವಿದ್ಯಾಲಯದ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ ಹೇಳಿದರು.

ನಗರದಲ್ಲಿ ಗಾಂಧಿ ಪ್ರತಿಷ್ಠಾನ ಹಾಗೂ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಶನಿವಾರ ಆಯೋಜಿಸಿದ್ದ ಸ್ಮಾರಕ ದತ್ತಿ ಉಪನ್ಯಾಸ ಹಾಗೂ ಡಬ್ಲ್ಯು. ಎಚ್.ಹನುಮಮಂತಪ್ಪ ಅವರು ಬರೆದ ‘ಬ್ರಹ್ಮಧರ್ಮ-ಗಾಯತ್ರಿ’ ಕಿರುಪುಸ್ತಕ ಬಿಡುಗಡೆಯಲ್ಲಿ ಅವರು ಮಾತನಾಡಿದರು.

‘ಜೀವತತ್ವ, ಜಗತತ್ವ ಹಾಗೂ ಬ್ರಹ್ಮತತ್ವ ಎಂಬುದನ್ನು ಬ್ರಹ್ಮಸಮಾಜ ಪ್ರತಿಪಾದಿಸುತ್ತದೆ. ಇದು ಎಲ್ಲರಿಗೂ ಬೆಳಕು ತೋರಿಸುತ್ತದೆ’ ಎಂದರು.

‘ಗಾಂಧಿ ವಿಚಾರಧಾರೆಗಳತ್ತ ಹನುಮಂತಪ್ಪ ಒಲವು ತೋರಿದ್ದರು’ ಎಂದು ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಕೃಷ್ಣ, ‘ಮಹಾತ್ಮ ಗಾಂಧಿಯನ್ನು ಕೇಂದ್ರವಾಗಿ ಇಟ್ಟುಕೊಂಡು 50 ವರ್ಷಗಳಿಂದ ದತ್ತಿ ಉಪನ್ಯಾಸ ನಡೆಸಲಾಗುತ್ತಿದೆ. ಸರಳತೆಯ ಮೂಲಕ ಬದುಕು ಕಟ್ಟಿಕೊಳ್ಳಬೇಕು. ಸರಳತೆಯಿದ್ದರೆ ವೈಭೋಗವು ನೆನಪಿಗೆ ಬರುವುದಿಲ್ಲ’ ಎಂದರು.

ಸಂಯುಕ್ತ ಕರ್ನಾಟಕ
25 ಡಿಸೆಂಬರ್ 2022 ಭಾನುವಾರ

# ಬೇಂದ್ರೆ ಕಾವ್ಯದಲ್ಲಿ ಜೀವನ ದರ್ಶನ

ಸಂ.ಕ.ಸಮಾಚಾರ, ಬೆಂಗಳೂರು

ಬೇಂದ್ರೆ ಕಾವ್ಯದ ಆರಾಧನೆಯಲ್ಲಿ ಜೀವನ ದರ್ಶನ ಮೂಲಕ ಶಾಂತಿ ಅಹಿಂಸೆಯ ಮೌಲ್ಯವನ್ನು ಗಾಂಧಿ ತತ್ವವನ್ನು ಪ್ರತಿಪಾದಿಸಿದರು, ಬೇಂದ್ರೆ ಕವನಗಳಲ್ಲಿ ಸಮಾಜದ ಸರ್ವತೋಮುಖ ಚಿಂತನೆಯಿದೆ ಎಂದು ವಿಮರ್ಶಕ ಡಾ.ಜಿ.ಕೃಷ್ಣಪ್ಪ ತಿಳಿಸಿದರು.

ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜು ಸಹ ಯೋಗದಲ್ಲಿ ಬ್ರಹ್ಮ ಸಮಾಜದ ಮುಖಂಡ ಮತ್ತು ಹಿರಿಯ ಗಾಂಧಿವಾದಿ ಡಬ್ಲ್ಯೂ ಎಚ್. ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸದದಲ್ಲಿ 'ಬೇಂದ್ರೆಯವರ ದೃಷ್ಟಿಯಲ್ಲಿಸ್ವಾತಂತ್ರ್ಯ ಮತ್ತು ಗಾಂಧೀಜಿ' ವಿಷಯದ ಕುರಿತು ದತ್ತಿ ಉಪನ್ಯಾಸವನ್ನು ನೀಡಿದ ಅವರು, ಮನಸ್ಸಿನ ಸಮಸ್ಥಿತಿ ಕಳೆದುಕೊಳ್ಳದೆ. ಮನಸ್ಸನ್ನು ವಿಶಾಲ ಮಾಡಿಕೊಳ್ಳುವುದರಿಂದ ಮಹಾತ್ಮನ ಮಹತ್ತು ಗೋಚರಿಸುತ್ತದೆ. ಗಾಂಧಿ ದೇಹದಿಂದ ದೂರವಾದರು ಅವರ ಆತ್ಮ ಜ್ಯೋತಿ ನಂದಿಲ್ಲ ಇಂದಿಗೂ ವೂಡೆ ಮನೆತನದವರು ನಾಡಿನಾದ್ಯಂತ ಬೆಳಕಿನ ಜ್ಞಾನ ತೇಜಸ್ವಿ ಬಾಪು ವಿಚಾರಧಾರೆಗೆ ತೈಲಧಾರೆ ಎರೆಯುತ್ತಿ ಅನುರರನ್ನಾಗಿಸಿದ್ದಾರೆಂದು ಅಭಿಪ್ರಾಯ ವ್ಯಕ್ತಪಡಿಸಿದರು.

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ. ಜಿ. ವೆಂಕಟೇಶ ಮಾತನಾಡಿ, ಪ್ರಾತಃ ಸ್ಮರಣೀಯರಾದ ಡಬ್ಲ್ಯೂ ಎಚ್. ಹನುಮಂತಪ್ಪ ಅವರು ಎಂಟು ದಶಕದ ಹಿಂದೆ ಬರೆದ ಎರಡು ಲೇಖನಗಳ ಸಂಯುಕ್ತ ಕಿರುಪುಸ್ತಕ 'ಬ್ರಹ್ಮಧರ್ಮ-ಗಾಯತ್ರಿ' ಲೋಕಾರ್ಪಣೆಗೊಳಿಸಿ ಬ್ರಹ್ಮಧರ್ಮ ಎಂಬುದು ಅಂತರಂಗದ ನಿರ್ಮಲತ್ವವನ್ನು ಪ್ರತಿನಿಧಿಸುತ್ತದೆ ಹಾಗೂ ಸಾಮಾಜಿಕ ಧರ್ಮದ ಕಡೆಗೆ ನಮ್ಮನ್ನು ತುಡಿಯುವಂತೆ ಮಾಡುತ್ತದೆ. ಮತ್ತೊಂದು ಗಾಯತ್ರಿ ಉಪಾಸನೆ ಬೆಳಕಿನ ಕಡೆಗೆ ಹೋಗುವ ಉಪಾಸನೆಯ ಆಧ್ಯಾತ್ಮಿಕ ಅನನ್ಯತೆಯನ್ನು ತಿಳಿಸುತ್ತದೆ. ಸರಳ ನಿರೂಪಣೆಯ ಈ ಹೊತ್ತಗೆ ಆಧ್ಯಾತ್ಮ ಪಿಪಾಸುಗಳಿಗೆ ಕೈಗನ್ನಡಿಯಾಗಿದೆ ಎಂದು ತಿಳಿಸಿದರು.

ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಜೀರಿಗೆ ಲೋಕೇಶ್ ಅಧ್ಯಕ್ಷತೆ ವಹಿಸಿದ್ದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌ. ಪ್ರಧಾನ ಕಾರ್ಯದರ್ಶಿ ಡಾ. ವೂಡೇ.ಪಿ. ಕೃಷ್ಣ, ಗಾಂಧಿ ಶಾಂತಿ ಪ್ರತಿಷ್ಠಾನದ ಕಾರ್ಯದರ್ಶಿ ಡಾ. ಸತ್ಯಮಂಗಲ ಮಹಾದೇವ, ಖಜಾಂಚಿ ಡಾ. ಸಿಸಿರಾ, ವೂಡೆ ಪ್ರತಿಷ್ಠಾನದ ದತ್ತಿ ದಾನಿಗಳ ಪ್ರತಿನಿಧಿ ಡಬ್ಲ್ಯೂ.ಹೆಚ್. ದೇವಕುಮಾರ್, ಶೇಷಾದ್ರಿಪುರಂ ಸಂಜೆ ಕಾಲೇಜಿನ ಪ್ರಾಂಶುಪಾಲ ಪ್ರೊ.ಎನ್.ಎಸ್.ಸತೀಶ್ ಉಪಸ್ಥಿತರಿದ್ದರು.




ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಮ್ಮಿಕೊಂಡಿದ್ದ ದತ್ತಿ ಉಪನ್ಯಾಸ ಕಾರ್ಯಕ್ರಮದಲಿ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ, ಡಾ.ಜಿ.ಕೃಷ್ಣಪ್ಪ, ವೂಡೇ ಪಿ. ಕೃಷ್ಣ ಅವರನ್ನು ಸನ್ಮಾನಿಸಲಾಯಿತು.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ

VIJAYAVANI >> BENGALURU
ಭಾನುವಾರ 25 ಡಿಸೆಂಬರ್ 2022
25 DECEMBER 2022




ಎಂ.ಚಂದ್ರಶೇಖರ ಪ್ರತಿಷ್ಠಾನ ಪುರಭವನದಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಡಿ.ಎಸ್.ನಾಗಭೂಷಣ ಅವರ 'ಗಾಂಧಿ ಕಥನ', ಎರಡನೇ ಆವೃತ್ತಿ ಬಿಡುಗಡೆ ಮಾಡಲಾಯಿತು. ಇತಿಹಾಸಕಾರ ರಾಮಚಂದ್ರ ಗುಹಾ, ಕಾಂಗ್ರೆಸ್ ಮುಖಂಡರಾದ ಡಿ.ಆರ್. ಪಾಟೀಲ್, ಎಚ್.ಕೆ.ಪಾಟೀಲ್, ಪ್ರಕಾಶಕ ಎಂ.ಸಿ.ನರೇಂದ್ರ ಇತರರಿದ್ದರು.




ನಗರದ ಗಾಂಧಿ ಭವನದಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನ ವತಿಯಿಂದ ಹಮ್ಮಿಕೊಂಡಿದ್ದ ಡಬ್ಲ್ಯೂ.ಎಚ್. ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಹಾಗೂ ಬ್ರಹ್ಮಧರ್ಮ ಗಾಯಿತ್ರಿ ಪುಸ್ತಕ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಪ್ರೊ. ಪಿ. ಕೃಷ್ಣ ಅವರು ಬ್ರಹ್ಮಧರ್ಮ ಗಾಯತ್ರಿ ಕಿರು ಪುಸ್ತಕವನ್ನು ಬಿಡುಗಡೆ ಮಾಡಿದರು. ಗಾಂಧಿ ಶಾಂತಿ ಪ್ರತಿಷ್ಠಾನ ಜೇರಿಗೆ ಲೋಕೇಶ್, ವಿಮರ್ಶಕರಾದ ಜಿ. ಕೃಷ್ಣಪ್ಪ ಮತ್ತು ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಮತ್ತಿತರರು ಹಾಜರಿದ್ದರು.

# ಇಂದಿನ ಕಾರ್ಯಕ್ರಮ 24-12-2022, ಶನಿವಾರ

## ಉದಯವಾಣಿ

ಶನಿವಾರ, ಡಿಸೆಂಬರ್ 24, 2022

■ **ಗಾಂಧಿ ಶಾಂತಿ ಪ್ರತಿಷ್ಠಾನ:** ಹಿರಿಯ ಗಾಂಧಿವಾದಿ ಡಬ್ಲ್ಯೂ.ಎಚ್. ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಮತ್ತು ಬ್ರಹ್ಮಧರ್ಮ ಗಾಯತ್ರಿ ಕಿರು ಪುಸ್ತಕ ಬಿಡುಗಡೆ ಕಾರ್ಯಕ್ರಮ. ಮುಖ್ಯ ಅತಿಥಿಗಳು: ವಿಮರ್ಶಕ ನಾಡೋಜ ಡಾ.ಜಿ. ಕೃಷ್ಣಪ್ಪ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ, ಕರ್ನಾಟಕ ಸಂಸ್ಕೃತ ವಿವಿ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ. ಸ್ಥಳ: ಮೈಲಾರ ಮಹಾದೇವ ಸಭಾಂಗಣ, ಗಾಂಧಿಭವನ, ಕುಮಾರಪಾರ್ಕ್ ಪೂರ್ವ. ಸಂಜೆ 4.15ಕ್ಕೆ.

## ವಿಜಯ ಕರ್ನಾಟಕ

ಶನಿವಾರ,24 ಡಿಸೆಂಬರ್ 2022,
ಬೆಂಗಳೂರು

**ಗಾಂಧಿ ಶಾಂತಿ ಪ್ರತಿಷ್ಠಾನ:** ಡಬ್ಲ್ಯು. ಎಚ್.ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ (ಬೇಂದ್ರೆಯವರ ದೃಷ್ಟಿಯಲ್ಲಿ ಸ್ವಾತಂತ್ರ್ಯ ಮತ್ತು ಗಾಂಧೀಜಿ) ಹಾಗೂ ಬ್ರಹ್ಮಧರ್ಮ ಗಾಯತ್ರಿ ಕಿರುಪುಸ್ತಕ ಲೋಕಾರ್ಪಣೆ.

**ಸ್ಥಳ:** ಗಾಂಧಿ ಭವನ, ಕುಮಾರಪಾರ್ಕ್ ಪೂರ್ವ. ಸಂಜೆ 4.15.

## ಪ್ರಜಾವಾಣಿ

ಶನಿವಾರ • ಡಿಸೆಂಬರ್ 24, 2022

ಸ್ಥಳ: ಕೃಷ್ಣರಾಜ ಪರಿಷನ್ಮಂದಿರ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಸಂಜೆ 4

**ಡಬ್ಲ್ಯು.ಎಚ್. ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಹಾಗೂ 'ಬ್ರಹ್ಮಧರ್ಮ ಗಾಯತ್ರಿ' ಪುಸ್ತಕ ಬಿಡುಗಡೆ:** ಅಧ್ಯಕ್ಷತೆ: ಜೀರಿಗೆ ಲೋಕೇಶ್, ಉಪಸ್ಥಿತಿ: ವೂಡೇ ಪಿ. ಕೃಷ್ಣ, ವಿಷಯ: 'ಬೇಂದ್ರೆಯವರ ದೃಷ್ಟಿಯಲ್ಲಿ ಸ್ವಾತಂತ್ರ್ಯ ಮತ್ತು ಗಾಂಧೀಜಿ', ಉಪನ್ಯಾಸಕರು: ಜಿ. ಕೃಷ್ಣಪ್ಪ, ಕೃತಿ ಬಿಡುಗಡೆ: ಮಲ್ಲೇಪುರಂ ಜಿ. ವೆಂಕಟೇಶ, ಆಯೋಜನೆ: ಗಾಂಧಿ ಶಾಂತಿ ಪ್ರತಿಷ್ಠಾನ, ಸ್ಥಳ: ಮೈಲಾರ ಮಹಾದೇವ ಸಭಾಂಗಣ, ಗಾಂಧಿ ಭವನ, ಕುಮಾರ ಪಾರ್ಕ್ ಪೂರ್ವ, ಸಂಜೆ 4.15

ಉದಯವಾಣಿ | ಗುರುವಾರ | ಡಿಸೆಂಬರ್ | 22 | 2022



ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಹಿರಿಯ ಸಂಸ್ಕೃತ ವಿದ್ವಾಂಸ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ.ಕೃಷ್ಣ ಅವರು ಸಾಹಿತಿ ಕೆ.ಎಂ.ರೇವಣ್ಣ ದಂಪತಿಗಳನ್ನು ಸನ್ಮಾನಿಸಿದರು.

# ಬಂತು ಗಾಂಧಿ ಕಥನ 25ನೇ ಆವೃತ್ತಿ

## ಹೋರಾಟವನ್ನು ವೃತ್ತಿಯಂತೆ ಪಾಲಿಸಿದ ಗಾಂಧೀಜಿ: ರಾಮಚಂದ್ರ ಗುಹಾ ಅಭಿಮತ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಪಾರದರ್ಶಕ ಜೀವನ ನಡೆಸಿದ ಮಹಾತ್ಮ ಗಾಂಧೀಜಿಯವರು ಅಸ್ಪೃಶ್ಯತೆ, ಜಾತಿ ಪದ್ಧತಿ ನಾಶ, ಅಹಿಂಸಾ ಚಳವಳಿ ಮತ್ತು ಕೋಮು ದ್ವೇಷ ಅಂತ್ಯಗೊಳಿಸುವ ಹೋರಾಟವನ್ನು ವೃತ್ತಿಯಂತೆ ಪಾಲಿಸಿದ್ದರು ಎಂದು ಇತಿಹಾಸಕಾರ ರಾಮಚಂದ್ರ ಗುಹಾ ಹೇಳಿದರು.

ಬುಧವಾರ ನಗರದ ಟೌನ್ ಹಾಲ್‌ನಲ್ಲಿ ಎಂ.ಚಂದ್ರಶೇಖರ ಪ್ರತಿಷ್ಠಾನದಿಂದ ನಡೆದ ಡಿ.ಎಸ್.ನಾಗಭೂಷಣ ಅವರ 'ಗಾಂಧಿ ಕಥನ 25ನೇ ಆವೃತ್ತಿ ಬಿಡುಗಡೆ' ಮಾಡಿ ಅವರು ಮಾತನಾಡಿದರು.

'ಗಾಂಧೀಜಿ ಭೌತಿಕವಾಗಿ ಇಲ್ಲದೆ 75 ವರ್ಷಗಳಾದರೂ ಎಂದೆಂದಿಗೂ ಪ್ರಸ್ತುತರಾಗಿಯೇ ಇರುತ್ತಾರೆ. ಒಳ ತಂತ್ರಗಾರಿಕೆ ಇಲ್ಲದೆ ನೇರವಾಗಿ ಮಾತನಾಡುತ್ತಿದ್ದ ಅವರು ವಿಶೇಷವಾದ ವ್ಯಕ್ತಿತ್ವ ಹೊಂದಿದ್ದರು. ಎಲ್ಲರೊಂದಿಗೆ ಸಮಾಲೋಚನೆ ನಡೆಸಿ ಅಭಿಪ್ರಾಯಕ್ಕೆ ಬರುತ್ತಿದ್ದರು. ಯುವ ಸಮುದಾಯ ಅವರ ಆಶಯಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು' ಎಂದರು.




ಟೌನ್ ಹಾಲ್‌ನಲ್ಲಿ ನಡೆದ ಕಾರ್ಯಕ್ರಮದಲ್ಲಿ ಇತಿಹಾಸಕಾರ ರಾಮಚಂದ್ರ ಗುಹಾ ಡಿ.ಎಸ್.ನಾಗಭೂಷಣರ 'ಗಾಂಧಿ ಕಥನ 25ನೇ ಆವೃತ್ತಿ' ಬಿಡುಗಡೆ ಮಾಡಿದರು. ಎಚ್.ಕೆ.ಪಾಟೀಲ್, ವೂಡೇ ಪಿ.ಕೃಷ್ಣ, ರಾಜೇಂದ್ರ ಚೆನ್ನಿ, ಸವಿತಾ ನಾಗಭೂಷಣ ಇದ್ದರು.

**ಕಾಂಗ್ರೆಸ್ ಸೇರಿ ಯಾವುದೇ ಪಕ್ಷಕ್ಕೂ ರೈತರನ್ನು ಸದೃಢಗೊಳಿಸಬೇಕು ಎಂಬ ಮನೋಭಾವ ಇದ್ದಂತಿಲ್ಲ. ಹೀಗಾಗಿಯೇ ಬೆಳೆಗೆ ಸೂಕ್ತ ಬೆಲೆಗಾಗಿ ಸರ್ಕಾರದ ಬಳಿ ಬೇಡುವ ಸ್ಥಿತಿ ಇದೆ.**

• **ಡಿ.ಆರ್.ಪಾಟೀಲ**
ಮಾಜಿ ಶಾಸಕ

ಮಾಜಿ ಶಾಸಕ ಡಿ.ಆರ್.ಪಾಟೀಲ ಮಾತನಾಡಿ, ಗಾಂಧೀಜಿ ಅವರ ಮೌಲ್ಯಗಳನ್ನು ಯುವಜನರಲ್ಲಿ ಸ್ಥಾಪಿಸುವ ಅಗತ್ಯ ಹಿಂದೆಂದಿಗಿಂತಲೂ ಇಂದು ಹೆಚ್ಚಾಗಿದೆ. ಆ ಮೂಲಕ ಜನರ ಮನೋಭಾವ ಬದಲಾಯಿಸಬಹುದು. ಗ್ರಾಮೀಣ ಭಾಗದಲ್ಲಿ ಎಲ್ಲ ಧರ್ಮ, ಜಾತಿಯವರು ಸಹಜೀವನ ನಡೆಸುತ್ತಿದ್ದಾರೆ. ಆದರೆ, ವೋಟ್ ಬ್ಯಾಂಕ್ ಕಾರಣಕ್ಕೆ ಹಳ್ಳಿಗಳಲ್ಲಿಯೂ ಕೋಮು ದ್ವೇಷದ ವಾತಾವರಣ ನಿರ್ಮಾಣ ಮಾಡಲಾಗುತ್ತಿದೆ. ಇಂತಹ ಪರಿಸ್ಥಿತಿಯಲ್ಲಿ ಗಾಂಧಿ ಮೌಲ್ಯಗಳನ್ನು ಸಾರಬೇಕಿದೆ ಎಂದು ಹೇಳಿದರು.

ಪ್ರಸ್ತುತ ಪ್ರಜಾಪ್ರಭುತ್ವದಲ್ಲಿ ಜನರ ಬದಲಾಗಿ ಪ್ರತಿನಿಧಿಗಳೇ ಪ್ರಭುಗಳಾಗಿದ್ದಾರೆ. ಅವರಿಂದ ಅಧಿಕಾರವನ್ನು ಕಸಿದುಕೊಳ್ಳುವ ಅಗತ್ಯವಿದೆ. ಯುವಪೀಳಿಗೆ ಗಾಂಧೀಜಿ ಅವರನ್ನು ಓದಿಕೊಂಡಾಗ ಮಾತ್ರ ಇದು ಸಾಧ್ಯ ಎಂದು ತಿಳಿಸಿದರು.

ಪ್ರಕಾಶಕ ಎಂ.ಸಿ.ನರೇಂದ್ರ, ಮಕ್ಕಳು ಪಠ್ಯದ ಹೊರತಾಗಿ ಓದಲು ನಿರಾಸಕ್ತಿ ತೋರುತ್ತಿರುವುದು ಬೇಸರದ ವಿಚಾರ. ಶಿಕ್ಷಣ ವ್ಯವಸ್ಥೆಯಲ್ಲಿ ಸುಧಾರಣೆ ತರುವ ಅಗತ್ಯ ಹೆಚ್ಚಾಗಿದೆ. ಉನ್ನತ ಶಿಕ್ಷಣ ಪಡೆದವರು ಉದ್ಯೋಗಕ್ಕಾಗಿ ವಿದೇಶಕ್ಕೆ ತೆರಳುತ್ತಿದ್ದು, ಪಾಲಕರು ಅನಾಥ ಭಾವನೆಯಿಂದ ಬದುಕು ದೂಡುವಂತಾಗಿದೆ ಎಂದರು.'

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ। ವೂಡೇ ಪಿ.ಕೃಷ್ಣ ಅವರು 'ಬೆಳ್ಳಿಗೊಂದು ಬಳ್ಳಿ' ಕೃತಿ ಬಿಡುಗಡೆ ಮಾಡಿದರು. ಶಾಸಕ ಎಚ್.ಕೆ.ಪಾಟೀಲ್ ಅಧ್ಯಕ್ಷತೆ ವಹಿಸಿದ್ದರು. ವಿಮರ್ಶಕ ರಾಜೇಂದ್ರ ಚೆನ್ನಿ, ಸವಿತಾ ನಾಗಭೂಷಣ, ಸರೋಜಾ ಎಂ. ಚಂದ್ರಶೇಖರ ಇದ್ದರು.

ಪ್ರಜಾವಾಣಿ

ಗುರುವಾರ ● ಡಿಸೆಂಬರ್ 22, 2022

# 'ಗಾಂಧಿಗಿಂತ ಕೊಂದವರಿಗೆ ಹೆಚ್ಚು ಗೌರವ'

## ಕಾಂಗ್ರೆಸ್ ಮುಖಂಡ ಪಾಟೀಲ ಬೇಸರ ● 'ಗಾಂಧಿ ಕಥನ' ಪುಸ್ತಕ ಬಿಡುಗಡೆ

ಪ್ರಜಾವಾಣಿ ವಾರ್ತೆ

**ಬೆಂಗಳೂರು:** 'ಇಂದಿನ ರಾಜಕೀಯ ವ್ಯವಸ್ಥೆಯಲ್ಲಿ ಗಾಂಧೀಜಿ ಅವರಿಗಿಂತ ಅವರನ್ನು ಕೊಂದವರಿಗೇ ಹೆಚ್ಚು ಗೌರವ ನೀಡಲಾಗುತ್ತಿದೆ. ಗಾಂಧೀಜಿ ಅವರ ಮೌಲ್ಯಗಳನ್ನು ಯುವಜನರಲ್ಲಿ ಸ್ಥಾಪಿಸುವ ಮೂಲಕ ಜನರ ಮನೋಭಾವ ಬದಲಾಯಿಸಬೇಕು' ಎಂದು ಕಾಂಗ್ರೆಸ್ ಮುಖಂಡ ಡಿ.ಆರ್. ಪಾಟೀಲ ತಿಳಿಸಿದರು.

ಎಂ. ಚಂದ್ರಶೇಖರ ಪ್ರತಿಷ್ಠಾನ ನಗರದಲ್ಲಿ ಬುಧವಾರ ಹಮ್ಮಿಕೊಂಡ ಕಾರ್ಯಕ್ರಮದಲ್ಲಿ ಡಿ.ಎಸ್. ನಾಗಭೂಷಣ ಅವರ 'ಗಾಂಧಿ ಕಥನ' 25ನೇ ಆವೃತ್ತಿ ಬಿಡುಗಡೆ ಮಾಡಲಾಯಿತು.

'ಗ್ರಾಮೀಣ ಭಾಗದಲ್ಲಿ ಎಲ್ಲ ಧರ್ಮ, ಜಾತಿಯವರು ಸಹಬಾಳ್ವೆಯಿಂದ ಜೀವನ ಸಾಗಿಸುತ್ತಿದ್ದಾರೆ. ನಮ್ಮ ಕ್ಷೇತ್ರದಲ್ಲಿ ಮುಸ್ಲಿಂರು ಹನುಮಂತನ ದೇವಾಲಯ ನಿರ್ಮಿಸಿದ್ದಾರೆ. ಆದರೆ, ರಾಜಕೀಯ ಲಾಭಕ್ಕಾಗಿ ಹಳ್ಳಿಗಳಲ್ಲಿಯೂ ದ್ವೇಷದ ವಾತಾವರಣ ನಿರ್ಮಾಣ ಮಾಡಲಾಗುತ್ತಿದೆ. ಧರ್ಮದ ಹಿನ್ನೆಲೆಯಲ್ಲಿ ಏನೇನೋ ನಡೆಸಲಾಗುತ್ತಿದೆ. ಈ ಸಂದರ್ಭದಲ್ಲಿ ಗಾಂಧಿ ಮೌಲ್ಯಗಳನ್ನು ಸಾರಬೇಕು' ಎಂದು ಡಿ. ಆರ್. ಪಾಟೀಲ ಹೇಳಿದರು.



'ಗಾಂಧಿ ಕಥನ' ಕೃತಿಯ 25ನೇ ಆವೃತ್ತಿಯನ್ನು ರಾಮಚಂದ್ರ ಗುಹಾ ಬಿಡುಗಡೆ ಮಾಡಿದರು. ವಿಮರ್ಶಕ ರಾಜೇಂದ್ರ ಚೆನ್ನಿ,ಡಿ. ಆರ್.ಪಾಟೀಲ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಶಾಸಕ ಎಚ್.ಕೆ. ಪಾಟೀಲ, ಎಂ. ಚಂದ್ರಶೇಖರ್ ಪ್ರತಿಷ್ಠಾನದ ಗೌರವಾಧ್ಯಕ್ಷೆ ಸರೋಜಾ ಎಂ. ಚಂದ್ರಶೇಖರ್, ಕವಯಿತ್ರಿ ಸವಿತಾ ನಾಗಭೂಷಣ ಹಾಗೂ ಹೋರಾಟಗಾರ್ತಿ ವಾಣಿ ಪೆರಿಯೋಡಿ ಇದ್ದಾರೆ. – ಪ್ರಜಾವಾಣಿ ಚಿತ್ರ

'ರೈತರನ್ನು ಆರ್ಥಿಕವಾಗಿ ಸದೃಢಗೊಳಿಸಬೇಕೆಂಬ ಮನಸ್ಥಿತಿ ಕಾಂಗ್ರೆಸ್ ಸೇರಿ ಯಾವುದೇ ಪಕ್ಷಕ್ಕೂ ಇಲ್ಲ. ಈಗಲೂ ಬೆಳೆದ ಬೆಳೆಗೆ ಸೂಕ್ತ ಬೆಲೆಗಾಗಿ ಸರ್ಕಾರವನ್ನು ಅಂಗಲಾಚಬೇಕೆ? ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರಜೆಗಳೇ ಪ್ರಭುಗಳು. ಆದರೆ, ಈಗ ಪ್ರತಿನಿಧಿಗಳು ಪ್ರಭುಗಳಾಗಿದ್ದಾರೆ. ಪ್ರತಿನಿಧಿಗಳನ್ನು ಆರಿಸುವ ನಾವು, ಅಧಿಕಾರವನ್ನು ಕಸಿದುಕೊಳ್ಳಬೇಕು. ಅಂತಹ ವಾತಾವರಣ ನಿರ್ಮಾಣಕ್ಕೆ ಯುವಪೀಳಿಗೆ ಗಾಂಧೀಜಿ ಅವರನ್ನು ಓದಬೇಕು' ಎಂದರು.

ಗಾಂಧಿ ಪ್ರಸ್ತುತ:ಇತಿಹಾಸಕಾರ ರಾಮಚಂದ್ರ ಗುಹಾ, 'ಗಾಂಧೀಜಿ ಅವರು ಮರಣಹೊಂದಿ 75 ವರ್ಷಗಳಾದರೂ ಅವರು ಇಂದಿಗೂ ಪ್ರಸ್ತುತರಾಗಿದ್ದಾರೆ. ಅಸ್ಪೃಶ್ಯತೆ ಮತ್ತು ಜಾತಿ ಪದ್ಧತಿಗಳ ವಿರುದ್ಧದ ಹೋರಾಟ, ಅಹಿಂಸಾ ಚಳವಳಿ, ಕೋಮು ದ್ವೇಷ ತಗ್ಗಿಸುವುದನ್ನು ಅವರು ವೃತ್ತಿಯಂತೆ ಪಾಲಿಸಿದರು. ತಂತ್ರಗಾರಿಕೆ ಇಲ್ಲದೆ ಮಾತನಾಡುತ್ತಿದ್ದ ಗಾಂಧಿ, ವಿಶೇಷವಾದ ವ್ಯಕ್ತಿತ್ವ ಹೊಂದಿದ್ದರು. ಅವರ ಜೀವನ ಪಾರದರ್ಶಕವಾಗಿತ್ತು. ಎಲ್ಲರೊಂದಿಗೂ

### ಪುಸ್ತಕ ಪರಿಚಯ

**ಪುಸ್ತಕ:** 'ಗಾಂಧಿ ಕಥನ'
**ಲೇಖಕ:** ಡಿ.ಎಸ್. ನಾಗಭೂಷಣ
**ಪುಟಗಳು:** 744
**ಬೆಲೆ:** ₹ 450
**ಪ್ರಕಾಶನ:** ಎಂ. ಚಂದ್ರಶೇಖರ ಪ್ರತಿಷ್ಠಾನ

ಸಮಾಲೋಚನೆ ನಡೆಸುತ್ತಿದ್ದರು' ಎಂದು ಹೇಳಿದರು.

'ಸ್ವಾತಂತ್ರ್ಯ ಭಾರತದ ಪ್ರಭಾವಿ ಪ್ರಧಾನಿಗಳಾದ ಜವಾಹರಲಾಲ್ ನೆಹರೂ, ಇಂದಿರಾ ಗಾಂಧಿ ಹಾಗೂ ನರೇಂದ್ರ ಮೋದಿ ಅವರಿಗೆ ಅಧಿಕಾರ ಇದ್ದರೂ ಮಾಡಲು ಸಾಧ್ಯವಾಗದ್ದನ್ನು ಗಾಂಧೀಜಿ ಅವರು ಏನೂ ಇಲ್ಲದೆ ಸಾಧಿಸಿದ್ದಾರೆ' ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಪ್ರಕಾಶಕಎಂ.ಸಿ.ನರೇಂದ್ರ, 'ಇತ್ತೀಚಿನ ದಿನಗಳಲ್ಲಿ ಮಕ್ಕಳು ಪುಸ್ತಕಗಳನ್ನು ಓದಲು ನಿರಾಸಕ್ತಿ ತೋರುತ್ತಿರುವುದು ವಿಪರ್ಯಾಸ. ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಸುಧಾರಣೆ ತರಬೇಕು. ಉನ್ನತ ಶಿಕ್ಷಣ ಪಡೆದವರು ಉದ್ಯೋಗಕ್ಕಾಗಿ ವಿದೇಶಕ್ಕೆ ತೆರಳುತ್ತಿದ್ದಾರೆ. ಇದರಿಂದಾಗಿ ಪಾಲಕರು ಅನಾಥ ಆಗುತ್ತಿದ್ದಾರೆ' ಎಂದು ಬೇಸರ ವ್ಯಕ್ತಪಡಿಸಿದರು.

ಕಲಾಪ್ರಿಯ 22 -12-2022

# ಕೆ.ಎಂ.ರೇವಣ್ಣ ಕೃತಿ ಲೋಕಾರ್ಪಣೆ



ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ರಿ ವತಿಯಿಂದ ಬೆಂಗಳೂರಿನ ಶೇಷಾದ್ರಿಪುರಂನ ಕಾಲೇಜಿನ ಸಭಾಂಗಣದಲ್ಲಿ ಏರ್ಪಡಿಸಿದ್ದ ಹಿರಿಯ ಸಾಹಿತಿ, ಸಂಸ್ಕೃತಿ ಪರಿಚಾರಕ ಕೆ.ಎಂ.ರೇವಣ್ಣ ಅವರಿಗೆ 76 ರ ಅಭಿನಂದನೆ, ಅವರ"ಯಶಸ್ಸಿನ ಸೂತ್ರಗಳು" ಕೃತಿ ಲೋಕಾರ್ಪಣೆ ಸಮಾರಂಭದಲ್ಲಿ ಕೆ.ಎಂ.ರೇವಣ್ಣ ಶ್ರೀಮತಿ ಮಂಗಳ ದಂಪತಿಗಳನ್ನು ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ.ವೂಡೇ ಪಿ.ಕೃಷ್ಣ, ರಮಣಮಹರ್ಷಿ ಸಮೂಹ ಸಂಸ್ಥೆಗಳ ಮುಖ್ಯಸ್ಥರಾದ ನಾಡೋಜ ಎಸ್. ಷಡಕ್ಷರಿ, ಕಾರ್ಯಕ್ರಮ ಆಯೋಜಕರಾದ ಸಂಸ್ಥೆಯ ಡಾ. ಸಿಸಿರಾ ಅವರುಗಳು ಅಭಿನಂದಿಸಿ ಗೌರವಿಸಿದರು.

# ಕ್ರಾಂತಿ ರಂಗ

ಗುರುವಾರ, 22 ಡಿಸೆಂಬರ್ 2022




ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ರಿ ವತಿಯಿಂದ ಬೆಂಗಳೂರಿನ ಶೇಷಾದ್ರಿಪುರಂನ ಕಾಲೇಜಿನ ಸಭಾಂಗಣದಲ್ಲಿ ಏರ್ಪಡಿಸಿದ್ದ ಹಿರಿಯ ಸಾಹಿತಿ. ಸಂಸ್ಕೃತಿ ಪರಿಚಾರಕ ಕೆ.ಎಂ.ರೇವಣ್ಣ ಅವರಿಗೆ 76 ರ ಅಭಿನಂದನೆ. ಅವರ"ಯಶಸ್ಸಿನ ಸೂತ್ರಗಳು" ಕೃತಿ ಲೋಕಾರ್ಪಣೆ ಸಮಾರಂಭದಲ್ಲಿ ಕೆ.ಎಂ.ರೇವಣ್ಣ ಮಂಗಳ ದಂಪತಿಗಳನ್ನು ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್. ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ.ವೂಡೇ ಪಿ.ಕೃಷ್ಣ. ರಮಣಮಹರ್ಷಿ ಸಮೂಹ ಸಂಸ್ಥೆಗಳ ಮುಖ್ಯಸ್ಥರಾದ ನಾಡೋಜ ಎಸ್. ಷಡಕ್ಷರಿ. ಕಾರ್ಯಕ್ರಮ ಆಯೋಜಕರಾದ ಸಂಸ್ಥೆಯ ಡಾ. ಸಿಸಿರಾ ಅವರುಗಳು ಅಭಿನಂದಿಸಿ ಗೌರವಿಸಿದರು.

ವಿಜಯವಾಣಿ

Dec 21, 2022



## ದಂಪತಿಗೆ ಸನ್ಮಾನ

ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ ವತಿಯಿಂದ ಶೇಷಾದ್ರಿಪುರಂ ಕಾಲೇಜಿನಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಹಿರಿಯ ಸಾಹಿತಿ ಕೆ.ಎಂ. ರೇವಣ್ಣ ಹಾಗೂ ಮಂಗಳ ದಂಪತಿ ಸನ್ಮಾನಿಸಲಾಯಿತು. ವಿಶ್ರಾಂತ ಕುಲಪತಿ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ಎಸ್. ಷಡಕ್ಷರಿ, ಡಾ. ವೂಡೇ ಪಿ.ಕೃಷ್ಣ, ಡಾ. ಎಸ್. ರಾಮಲಿಂಗೇಶ್ವರ ಇದ್ದರು.



ಬೆಂಗಳೂರು: ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ವತಿಯಿಂದ ಬೆಂಗಳೂರಿನ ಶೇಷಾದ್ರಿಪುರಂನ ಕಾಲೇಜಿನ ಸಭಾಂಗಣದಲ್ಲಿ ಏರ್ಪಡಿಸಿದ್ದ ಹಿರಿಯ ಸಾಹಿತಿ, ಸಂಸ್ಕೃತಿ ಪರಿಚಾರಕ ಕೆ.ಎಂ.ರೇವಣ್ಣ ಅವರಿಗೆ ೭೬ ರ ಅಭಿನಂದನೆ, ಅವರ "ಯಶಸ್ಸಿನ ಸೂತ್ರಗಳು" ಕೃತಿ ಲೋಕಾರ್ಪಣೆ ಸಮಾರಂಭದಲ್ಲಿ ಕೆ.ಎಂ.ರೇವಣ್ಣ ಶ್ರೀಮತಿ ಮಂಗಳ ದಂಪತಿಗಳನ್ನು ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ.ವೂಡೇ ಪಿ.ಕೃಷ್ಣ, ರಮಣಮಹರ್ಷಿ ಸಮೂಹ ಸಂಸ್ಥೆಗಳ ಮುಖ್ಯಸ್ಥರಾದ ನಾಡೋಜ ಎಸ್.ಷಡಕ್ಷರಿ, ಕಾರ್ಯಕ್ರಮ ಆಯೋಜಕರಾದ ಸಂಸ್ಥೆಯ ಡಾ. ಸಿಸಿರಾ ಅವರುಗಳು ಅಭಿನಂದಿಸಿ ಗೌರವಿಸಿದರು.

ಈ ಸಂಜೆ

Dec 12, 2022

ನಗರದ ನಯನ ಸಭಾಂಗಣದಲ್ಲಿ ಹಮ್ಮಿಕೊಂಡಿದ್ದ ಸಂಗೀತ ಧಾಮ ಸಂಭ್ರಮ ಕಾರ್ಯಕ್ರಮದಲ್ಲಿ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ.ಸಿ.ಸೋಮಶೇಖರ್, ರಮಣ ಶ್ರೀ ಟ್ರಸ್ಟ್ ಅಧ್ಯಕ್ಷ ಷಡಕ್ಷರಿ, ನಾಡೋಜ ವೊಡೇ ಪಿ.ಕೃಷ್ಣ, ಸಾಹಿತಿ ಡಾ.ಎಲ್. ಎಸ್.ವೆಂಕಟೇಶ್‌ಮುರ್ತಿ, ಸಂಗೀತ ಧಾಮ ಅಧ್ಯಕ್ಷ ಮೃತ್ಯುಂಜಯದೊಡ್ಡವಾಡ ಮತ್ತಿತರರು ಪಾಲ್ಗೊಂಡಿದ್ದರು.



ಪ್ರಜಾವಾಣಿ
ಶುಕ್ರವಾರ • ಡಿಸೆಂಬರ್ 9, 2022

ವಿವಿಧ ಪ್ರಶಸ್ತಿ, ಪುರಸ್ಕಾರಗಳ ಪ್ರದಾನ ಸಮಾರಂಭ • ಕನ್ನಡ ಗೆಳೆಯರ ಬಳಗದಿಂದ ಆಯೋಜನೆ

# ಸಂಶೋಧಕರದು ಅಪ್ರಿಯ ಸತ್ಯಗಳ ಕ್ಷೇತ್ರ: ಗೊರುಚ

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಸಂಶೋಧಕರು ಅಪ್ರಿಯ ಸತ್ಯಗಳನ್ನು ಹೇಳಬೇಕಾದ ಅನಿವಾರ್ಯತೆ ಎದುರಾದಾಗ ಭಾವೋದ್ವೇಗಕ್ಕೆ ಒಳಗಾಗದೆ ವಸ್ತುನಿಷ್ಠ ಅಧ್ಯಯನವನ್ನು ನಡೆಸಬೇಕು' ಎಂದು ಜಾನಪದ ವಿದ್ವಾಂಸ ಗೊ.ರು. ಚನ್ನಬಸಪ್ಪ ಹೇಳಿದರು.

ಕನ್ನಡ ಗೆಳೆಯರ ಬಳಗ ಬುಧವಾರ ಶೇಷಾದ್ರಿಪುರಂ ಕಾಲೇಜಿನಲ್ಲಿ ಆಯೋಜಿಸಿದ್ದ ವಿವಿಧ ಪ್ರಶಸ್ತಿ ಮತ್ತು ಪುರಸ್ಕಾರಗಳ ಪ್ರದಾನ ಸಮಾರಂಭದಲ್ಲಿ ಅವರು ಮಾತನಾಡಿದರು.

'ಕನ್ನಡದ ಹೆಸರಿನಲ್ಲಿ ನಾಡಿನಲ್ಲಿ ನೂರಾರು ಸಂಘಟನೆಗಳಿವೆ. ಆದರೆ, ಕನ್ನಡ ಗೆಳೆಯರ ಬಳಗವು ನೆರೆ, ಬರ ಪರಿಸ್ಥಿತಿಗಳಲ್ಲಿ ಮಾನವೀಯ ಕೆಲಸಗಳನ್ನು ಮಾಡುತ್ತ ಬಂದಿದೆ.ಬಳಗವು ಕನ್ನಡದ ಕೆಲಸಗಳಿಗೆ ನಿಜವಾದ ಘನತೆಯನ್ನು ತಂದುಕೊಟ್ಟಿದೆ' ಎಂದರು.



ನಗರದಲ್ಲಿ ಬುಧವಾರ ನಡೆದ ಸಮಾರಂಭದಲ್ಲಿ ಸಂಶೋಧಕರಾದ ಡಾ.ದೇವರಕೊಂಡಾ ರೆಡ್ಡಿ, ಡಾ.ಎಚ್.ಎಸ್. ಗೋಪಾಲರಾವ್, ಪ್ರೊ.ಲಕ್ಷ್ಮಣ ತೆಲಗಾವಿ ಅವರಿಗೆ 'ಚಿದಾನಂದಮೂರ್ತಿ ಕನ್ನಡ ಸಂಸ್ಕೃತಿ ಪ್ರಶಸ್ತಿ' ಪ್ರದಾನ ಮಾಡಲಾಯಿತು. ಗೊ.ರು. ಚನ್ನಬಸಪ್ಪ, ವೂಡೇ ಪಿ. ಕೃಷ್ಣ, ಡಾ.ಆರ್ ಶೇಷಶಾಸ್ತ್ರಿ, ರಾ.ನಂ. ಚಂದ್ರಶೇಖರ್ ಇದ್ದರು.

ಸಂಶೋಧಕ ಆರ್. ಶೇಷಶಾಸ್ತ್ರಿ ಮಾತನಾಡಿ, 'ಚಿದಾನಂದ ಮೂರ್ತಿ ಅವರು ಕನ್ನಡದ ಹಿತಕ್ಕಾಗಿ ಸಾತ್ವಿಕ ರೋಷದಿಂದ ತಾರ್ಕಿಕವಾಗಿ ಕೆಲಸ ಮಾಡಿದ ಅನುಪಮ ವಿದ್ವಾಂಸರಾಗಿದ್ದರು' ಎಂದು ಸ್ಮರಿಸಿದರು.

ಬಿಬಿಎಂಪಿ ಉಪ ಆಯುಕ್ತ ಡಾ.ಕೆ ಮುರಳೀಧರ, ಕನ್ನಡ ಗೆಳೆಯರ ಬಳಗದ ಸಂಚಾಲಕ ಬ್ರಾ. ಹ. ಉಪೇಂದ್ರ, ಕೇಂದ್ರೀಯ ಸದನ ಕನ್ನಡ ಸಂಘದ ಅಧ್ಯಕ್ಷ ಮ.ಚಂದ್ರಶೇಖರ ಇದ್ದರು.



**ಪ್ರಶಸ್ತಿ ಪ್ರದಾನ:** ಪ್ರೊ.ಲಕ್ಷ್ಮಣ ತೆಲಗಾವಿ, ಡಾ.ದೇವರಕೊಂಡಾ ರೆಡ್ಡಿ, ಡಾ.ಎಚ್. ಎಸ್. ಗೋಪಾಲರಾವ್ ಅವರಿಗೆ ಕ್ರಮವಾಗಿ 2020, 2021, 2022ನೇ ಸಾಲಿನ ಡಾ.ಎಂ ಚಿದಾನಂದಮೂರ್ತಿ ಕನ್ನಡ ಸಂಸ್ಕೃತಿ ಪ್ರಶಸ್ತಿ, ಬಾ.ಹ. ರಮಾಕುಮಾರಿ ಅವರಿಗೆ ಕನ್ನಡ ಅರವಿಂದ ಪ್ರಶಸ್ತಿ, ಸೈಮಬ್ ಬಾರ್ತಲೋಮಿಯೊ ಅವರಿಗೆ ಕನ್ನಡ ಚಿರಂಜೀವಿ ಪ್ರಶಸ್ತಿ, ವಿದುಷಿ ಶಾಮಲಾ ಪ್ರಕಾಶ್ ಅವರ 'ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಸಂಗೀತದ ಸಾಹಚರ್ಯ' ಕೃತಿಗೆ ಹಾಮಾನಾ ಕನ್ನಡ ಜಾಗೃತಿ ಪುಸ್ತಕ ಬಹುಮಾನ, ಶಶಿಧರ ಹಾಲಾಡಿ ಮತ್ತು ಜ್ಞಾನಶ್ರೀ ಅವರಿಗೆ ಕ್ರಮವಾಗಿ 'ಚಿತ್ತ ಹರಿದತ್ತ' ಮತ್ತು 'ಭವ್ಯ ಭಾರತದ ರಾಣಿಯರು' ಕೃತಿಗಳಿಗೆ ಸಮಾಧಾನಕರ ಬಹುಮಾನ, ರು.ಬಸಪ್ಪ ಅವರ 'ಕನ್ನಡ ಚಳವಳಿಯ ಪುಟಗಳಿಂದ' ಕೃತಿಗೆ ವಿಶೇಷ ಬಹುಮಾನಗಳನ್ನು ಪ್ರದಾನ ಮಾಡಲಾಯಿತು.



ಜತೆಗೆ 2021-22ನೇ ಸಾಲಿನ ಎಸ್ಸೆಸ್ಸೆಲ್ಸಿ , ಪರೀಕ್ಷೆಯಲ್ಲಿ ಕನ್ನಡ ಮಾಧ್ಯಮದಲ್ಲಿ ಹೆಚ್ಚು ಅಂಕ ಗಳಿಸಿದ ಎಂ. ವರ್ಷಿಣಿ, ಎ.ಜ್ಯೋತಿ, ಎಸ್. ವಾಣಿ, ಎಚ್ ಎಸ್ ವಂದನಾ, ಎನ್. ಕೋಮಲ, ಎಂ.ರಕ್ಷಿತ, ಟಿ.ಎಂ. ಲಕ್ಷ್ಮೀ, ಎಚ್.ಎಸ್. ದೀಕ್ಷಿತಾ, ಬಿ. ಶ್ರುತಿ, ಎಂ. ಶಿವರಾಜ್ ಅವರಿಗೆ ಸನ್ಮಾನಿಸಿ, ನಗದು ಬಹುಮಾನ ವಿತರಿಸಲಾಯಿತು.

ಅಲ್ಲದೆ, ಇಂಗ್ಲಿಷ್ ಮಾಧ್ಯಮದಲ್ಲಿ ಓದಿ, ಕನ್ನಡ ಭಾಷೆ ವಿಷಯದಲ್ಲಿ ಅತ್ಯಧಿಕ ಅಂಕ ಗಳಿಸಿದ ಒಂಬತ್ತು ವಿದ್ಯಾರ್ಥಿಗಳನ್ನು ಸನ್ಮಾನಿಸಲಾಯಿತು.

ಕೂಡ್ಲಿಗಿ ತಾಲ್ಲೂಕಿನ ನಾಗಲಾಪುರ ಸರಕಾರಿ ಶಾಲೆಗೆ ಕನ್ನಡ ಗೆಳೆಯರ ಬಳಗದಿಂದ ₹20 ಸಾವಿರ. ಆರ್ಥಿಕ ನೆರವು ನೀಡಲಾಯಿತು.

Bengaluru

ಪ್ರಜಾವಾಣಿ
08-12-2022

# ಯುವಜನರಿಗೆ ಮೌಲ್ಯ ಶಿಕ್ಷಣ ಅಗತ್ಯ

ಪ್ರಜಾವಾಣಿ ವಾರ್ತೆ

ತಿಪಟೂರು: 'ಯುವಜನರಿಗೆ ವಿವೇಕಾನಂದರ ಚಿಂತನೆಗಳಲ್ಲಿರುವ ಮೌಲ್ಯಯುತ ಶಿಕ್ಷಣದ ಅಗತ್ಯತೆ ಹೆಚ್ಚಿದೆ' ಎಂದು ತುಮಕೂರಿನ ರಾಮಕೃಷ್ಣ ವಿವೇಕಾನಂದ ಆಶ್ರಮದ ಅಧ್ಯಕ್ಷ ಸ್ವಾಮಿ ವೀರೇಶಾನಂದ ಸರಸ್ವತಿ ಸ್ವಾಮೀಜಿ ತಿಳಿಸಿದರು.

ನಗರದ ಗುರುಕುಲಾನಂದಾಶ್ರಮದಲ್ಲಿ ಮಂಗಳವಾರ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಬೆಂಗಳೂರು, ಎಂ.ಎಸ್. ಸಂದೀಪ್ ಟ್ರಸ್ಟ್, ಗುರುಕುಲಾನಂದಾಶ್ರಮ, ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಿಂದ ನಡೆದ ಎಂ.ಎಸ್. ಸಂದೀಪ್ ದತ್ತಿ ಉಪನ್ಯಾಸದಲ್ಲಿ ಅವರು, 'ಸ್ವಾಮಿ ವಿವೇಕಾನಂದ ಹಾಗೂ ಮಹಾತ್ಮ ಗಾಂಧೀಜಿ ಅವರ ಜೀವನ ಸಂದೇಶಗಳು' ಕುರಿತು ಮಾತನಾಡಿದರು.

ಯುವಕರು ಸ್ವಪ್ರಯತ್ನದಿಂದ ಅಸಾಧ್ಯವಾದುದನ್ನು ಸಾಧಿಸಬಹುದಾಗಿದೆ. ಅಂದರೆ, ನೀವು ಪ್ರಾಮಾಣಿಕವಾಗಿದ್ದರೆ ಅಂದುಕೊಂಡಿರುವುದನ್ನು ಸಾಧಿಸಬಹುದಾಗಿದೆ ಎಂದರು.

ಕಾಲೇಜು ಅಂದರೆ ವಸ್ತು ಪ್ರದರ್ಶನ ಕೇಂದ್ರವಲ್ಲ, ಅದು ಬೌದ್ಧಿಕ ಸಾಮರ್ಥ್ಯದಿಂದ ತುಂಬಿದ ಪವಿತ್ರ ಸ್ಥಳ. ಬುದ್ಧಿ ಮತ್ತು ಹೃದಯದ ಸಂಸ್ಕಾರವೇ ಶಿಕ್ಷಣವಾಗಬೇಕು. ವಿದ್ಯಾರ್ಥಿಗಳು ಅಲಂಕಾರ ಪ್ರಿಯರಾಗದೆ ಆಂದೋಲನ ಕಲಿಕೆಯ ಪ್ರಿಯರಾಗಬೇಕು. ಆಗ ಮಾತ್ರ ಯಶಸ್ವಿಯಾಗುತ್ತೀರಿ. ಕಠಿಣ ಪರಿಶ್ರಮವಿದ್ದರೆ ಗೆದ್ದೇ ಗೆಲ್ಲುತ್ತೀರಿ ಎಂದರು.

ಗುರುಕುಲಾನಂದಾಶ್ರಮದ ಶಾಮ್ನಡಿ ಕರಿಬಸವ ದೇಶಿಕೇಂದ್ರ ಸ್ವಾಮೀಜಿ ಮಾತನಾಡಿ, ಮನುಷ್ಯ ಏನನ್ನಾದರೂ ಸಾಧಿಸಬೇಕಾದರೆ ಶ್ರದ್ಧೆ, ನಿರಂತರ ಪ್ರಯತ್ನ, ನಿಜವಾದ ತಪಸ್ಸು ಇರಬೇಕು ಎಂದು ಹೇಳಿದರು.

ಅಂತರಂಗದಲ್ಲಿನ ಪ್ರಾಣ ಚೈತನ್ಯವೇ ನಿಜವಾದ ದೇವರು. ಮನೋ ಏಕಾಗ್ರತೆಯು ಸದಾಕಾಲ ಇರಬೇಕಾಗುತ್ತದೆ. ಮನುಷ್ಯನಲ್ಲಿ ಅಹಂಕಾರ ಕಡಿಮೆಯಾದರೆ ಏನನ್ನಾದರೂ ಸಾಧಿಸಬಹುದು ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಮಾತನಾಡಿ, ಜೀವನದಲ್ಲಿ ಎಷ್ಟು ದಿನ ಬದುಕಿದ್ದೇವೆ ಎಂಬುದು ಮುಖ್ಯವಲ್ಲ. ಹೇಗೆ ಬದುಕಿದ್ದೀವಿ ಎಂಬುದು ಮುಖ್ಯ. ವಿವೇಕಾನಂದ, ಶಂಕರಾಚಾರ್ಯ. ಗಾಂಧೀಜಿ ಬದುಕಿದ್ದು ಅಲ್ಪ ದಿನಗಳಾದರೂ ಅವರ ಸಾಧನೆಗಳು ಅಮೋಘವಾಗಿವೆ ಎಂದು ತಿಳಿಸಿದರು.

ಕಸ್ತೂರ ಬಾ ಗಾಂಧಿ ಆಶ್ರಮದ ಟ್ರಸ್ಟಿ ಬಿ. ಶಿವರಾಜು ಮಾತನಾಡಿ, ಯುವಕರಿಗೆ ಬೇಕಾಗಿರುವುದು ಬದುಕು ಕಟ್ಟುವ ಮೌಲ್ಯಗಳೇ ಹೊರತು ಆಡಂಬರದ ಜೀವನವಲ್ಲ. ಗಾಂಧೀಜಿ ಅವರ ಮೌಲ್ಯ ಮರೆತರೆ ವಿಶ್ವ ನಾಶವಾಗುತ್ತದೆ ಎಂದು ಎಚ್ಚರಿಸಿದರು.

ನಿವೃತ್ತ ಐಎಎಸ್ ಅಧಿಕಾರಿ ಎಂ.ಕೆ. ಶಂಕರಲಿಂಗೇಗೌಡ, ಎನ್.ಆರ್ ವಿಜಯಕುಮಾರ್, ಶಂಕರಲಿಂಗೇಗೌಡ, ಗಂಗಣ್ಣ, ಎಸ್. ಪಾಪಣ್ಣ, ಕೆ.ಜಿ. ಶ್ರೀನಿವಾಸ್, ಗುರುಕುಲ ಮಠದ ಕಾರ್ಯದರ್ಶಿಗಳಾದ ಎಚ್.ಎಸ್. ಸಿದ್ದರಾಮಯ್ಯ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಯುವ ಸದಸ್ಯ ಕ್ಯಾಪ್ಟನ್ ಬಿ.ಎಂ. ಹರಿಪ್ರಸಾದ್, ಬಿ. ಪ್ರತಾಪ್‌ಸಿಂಗ್. ಗುರುಕುಲ ವಿಜ್ಞಾನ ಮತ್ತು ವಾಣಿಜ್ಯ ಪಿಯು ಕಾಲೇಜಿನ ಸಂಯೋಜಕ ಎಸ್.ಆರ್. ಮಂಜುನಾಥ್. ಡಾ.ಹೊನ್ನಾಂಜನಯ್ಯ ಡಿ.ಆರ್., ಡಾ.ವೆಂಕಟೇಶ್ ಎಲ್.ಎಂ., ಡಾ.ಚಿಕ್ಕಹೆಗಡೆ, ಜ್ಯೋತಿ ಹಾಜರಿದ್ದರು.

ತಿಪಟೂರಿನ ಗುರುಕುಲಾನಂದಾಶ್ರಮದಲ್ಲಿ ನಡೆದ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ತುಮಕೂರಿನ ರಾಮಕೃಷ್ಣ ವಿವೇಕಾನಂದ ಆಶ್ರಮದ ಸ್ವಾಮಿ ವೀರೇಶಾನಂದ ಸರಸ್ವತಿ ಸ್ವಾಮೀಜಿ ಮಾತನಾಡಿದರು

ಪ್ರಜಾ ಪ್ರಗತಿ

08-12-2022

# ಪ್ರಾಮಾಣಿಕವಾಗಿದ್ದರೆ ಅಂದುಕೊಂಡಿದ್ದನ್ನು ಸಾಧಿಸಬಹುದು

## ಎಂ.ಎಸ್.ಸಂದೀಪ್ ದತ್ತಿ ಉಪನ್ಯಾಸದಲ್ಲಿ ವೀರೇಶಾನಂದ ಶ್ರೀ ನುಡಿ



■ ಪ್ರಜಾಪ್ರಗತಿ.ಕಾಂ

ತಿಪಟೂರು : ಇಂದಿನ ಯುವ ಜನರಿಗೆ ವಿವೇಕಾನಂದರ ಚಿಂತನೆಗಳಲ್ಲಿರುವ ಮೌಲ್ಯಯುತ ಶಿಕ್ಷಣದ ಅಗತ್ಯತೆ ಅನಿವಾರ್ಯವಾಗಿದೆ ಎಂದು ತುಮಕೂರಿನ ಶ್ರೀರಾಮಕೃಷ್ಣ ವಿವೇಕಾನಂದಾಶ್ರಮದ ಸ್ವಾಮಿ ವೀರೇಶಾನಂದ ಸರಸ್ವತಿ ಶ್ರೀಗಳು ತಿಳಿಸಿದರು.

ನಗರದ ಗುರುಕುಲಾನಂದಾಶ್ರಮದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಬೆಂಗಳೂರು, ಎಂ.ಎಸ್.ಸಂದೀಪ್ ಟ್ರಸ್ಟ್, ಶ್ರೀ ಗುರುಕುಲಾನಂದಾಶ್ರಮ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಇವರ ಸಂಯುಕ್ತಾಶ್ರಯದಲ್ಲಿ ಏರ್ಪಡಿಸಿದ್ದ ಎಂ.ಎಸ್.ಸಂದೀಪ್ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಮಾತನಾಡಿದ ಶ್ರೀಗಳು, ಸ್ವಾಮಿ ವಿವೇಕಾನಂದ ಹಾಗೂ ಮಹಾತ್ಮ ಗಾಂಧೀಜಿ ಅವರ ಜೀವನ ಸಂದೇಶಗಳು ಎಂಬ ವಿಚಾರವಾಗಿ ಮಾತನಾಡುತ್ತಾ, ಯುವಕರು ಸ್ವಪ್ರಯತ್ನದಿಂದ ಅಸಾಧ್ಯವಾದುದನ್ನು ಸಾಧಿಸಬಹುದಾಗಿದೆ. ಪ್ರಾಮಾಣಿಕವಾಗಿದ್ದರೆ ಅಂದುಕೊಂಡಿದ್ದನ್ನು ಸಾಧಿಸಬಹುದಾಗಿದೆ ಎಂದು ತಿಳಿಸಿದರು.

**ಶಿಕ್ಷಣ ಹೃದಯದ ಸಂಸ್ಕಾರವಾಗಲಿ :** ವಿದ್ಯಾರ್ಥಿಗಳು ಗುರುಗಳಿಂದ ಶೇ.25 ರಷ್ಟು, ಸತತ ಪರಿಶ್ರಮದಿಂದ ಶೇ.25, ಸ್ನೇಹಿತರಿಂದ ಶೇ.25, ಜೀವನದಿಂದ ಶೇ.25 ರಷ್ಟು ಜ್ಞಾನ ಕಲಿಯಬಹುದಾಗಿದೆ, ಕಾಲೇಜು ಅಂದರೆ ವಸ್ತು ಪ್ರದರ್ಶನ ಕೇಂದ್ರವಲ್ಲ, ಅದು ಬೌದ್ಧಿಕ ಸಾಮರ್ಥ್ಯದಿಂದ ತುಂಬಿದ ಪವಿತ್ರವಾದ ಸ್ಥಳವಾಗಿದೆ. ಬುದ್ಧಿ ಮತ್ತು ಹೃದಯದ ಸಂಸ್ಕಾರವೇ ಶಿಕ್ಷಣವಾಗಿ, ವಿದ್ಯಾರ್ಥಿಗಳು ಅಲಂಕಾರಪ್ರಿಯರಾಗದೆ ಆಂದೋಲನ ಕಲಿಕೆಯ ಪ್ರಿಯರಾಗಬೇಕು ಆಗ ಮಾತ್ರ ಯಶಸ್ವಿಯಾಗುತ್ತೀರಿ ಎಂದು ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

**ಅಹಂಕಾರ ಮೀರಿದರೆ ಯಶಸ್ಸು :** ಕಾರ್ಯಕ್ರಮದ ಸಾನಿಧ್ಯ ವಹಿಸಿದ್ದ ಗುರುಕುಲ ಶ್ರೀಗಳಾದ ಇಮ್ಮಡಿ ಕರಿಬಸವ ದೇಶೀಕೇಂದ್ರ ಸ್ವಾಮೀಜಿ ಮಾತನಾಡಿ, ಮನುಷ್ಯ ಏನನ್ನಾದರೂ ಸಾಧಿಸಬೇಕಾದರೆ ಶ್ರದ್ಧೆ, ನಿರಂತರ ಪ್ರಯತ್ನ, ನಿಜವಾದ ತಪಸ್ಸು ಇರಬೇಕು. ನಮ್ಮ ಅಂತರಂಗದಲ್ಲಿರುವ ಪ್ರಾಣ ಚೈತನ್ಯವೇ ನಿಜವಾದ ದೇವರು, ನಮ್ಮಲ್ಲಿ ಮನೋ ಏಕಾಗ್ರತೆ ಸದಾಕಾಲ ಇರಬೇಕಾಗುತ್ತದೆ. ಮನುಷ್ಯನಲ್ಲಿ ಅಹಂಕಾರ ಕಡಿಮೆಯಾದರೆ ಏನನ್ನಾದರೂ ಸಾಧಿಸಬಹುದು ಎಂದರು.

ಸಮಾರಂಭದಲ್ಲಿ ಎಸ್.ಆರ್.ವಿಜಯಕುಮಾರ್, ಉಷಾ ಶಂಕರಲಿಂಗೇಗೌಡ, ಬಿ.ಗಂಗಣ್ಣ, ಎಸ್.ಪಾಪಣ್ಣ, ಕೆ.ಜಿ.ಶ್ರೀನಿವಾಸ್, ಶ್ರೀ ಗುರುಕುಲ ಮಠದ ಕಾರ್ಯದರ್ಶಿ ಹೆಚ್.ಎಸ್. ಸಿದ್ದರಾಮಯ್ಯ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಸದಸ್ಯ ಕ್ಯಾ.ಬಿ.ಎಮ್.ಹರಿಪ್ರಸಾದ್, ಲೇಖಕ ಬಿ.ಪ್ರತಾಪ್‌ಸಿಂಗ್, ಗುರುಕುಲ ವಿಜ್ಞಾನ ಮತ್ತು ವಾಣಿಜ್ಯ ಪಿಯು ಕಾಲೇಜಿನ ಸಂಯೋಜಕ ಎಸ್.ಆರ್.ಮಂಜುನಾಥ್, ಡಾ.ಡಿ.ಆರ್. ಹೊನ್ನಾಂಜಿನಯ್ಯ, ಡಾ.ಎಲ್.ಎಂ.ವೆಂಕಟೇಶ್, ಡಾ.ಚಿಕ್ಕಹೆಗಡೆ, ಪ್ರೊ.ಜ್ಯೋತಿ, ಮತ್ತಿತರು ಉಪಸ್ಥಿತರಿದ್ದರು.

### ಸಕಾರಾತ್ಮಕ ಯೋಚನೆಯಿಂದ ಜೀವನ ಉತ್ಕೃಷ್ಟ

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ನಿವೃತ್ತ ಐಎಎಸ್ ಅಧಿಕಾರಿ ಎಂ.ಕೆ. ಶಂಕರಲಿಂಗೇಗೌಡ ಮಾತನಾಡಿ, ಯುವಕರು ಯಾವುದೇ ಸಂದರ್ಭದಲ್ಲಿಯೂ ಭಯಪಡಬಾರದು, ಎಲ್ಲವನ್ನು ಆತ್ಮಸ್ಥೈರ್ಯದಿಂದ ಎದುರಿಸಿದರೆ ಮಾತ್ರ ಸದೃಢ ಬದುಕನ್ನು ಕಟ್ಟಿಕೊಳ್ಳಬಹುದು. ಸಕಾರಾತ್ಮಕ ಯೋಚನೆಗಳಿಂದ ಮಾತ್ರ ಜೀವನ ಉತ್ಕೃಷ್ಟವಾಗುತ್ತದೆ ಎಂದರು.

ಜೀವನದಲ್ಲಿ ಎಷ್ಟು ದಿನ ಬದುಕಿದ್ದೇವೆ ಎಂಬುದಕ್ಕಿಂತ, ಹೇಗೆ ಬದುಕಿದ್ದೇವೆ ಎಂಬುದು ಮುಖ್ಯ. ವಿವೇಕಾನಂದ, ಶಂಕರಾಚಾರ್ಯ, ಗಾಂಧೀಜಿ ಬದುಕಿದ್ದು ಅಲ್ಪವಾಗಿದ್ದರೂ ಸಾಧನೆ ಶ್ಲಾಘನೀಯವಾದದ್ದು

-ನಾಡೋಜ ಡಾ.ವೂಡೇ ಪಿ.ಕೃಷ್ಣ

ಯುವಕರಿಗೆ ಇಂದು ಬೇಕಾಗಿರುವುದು ಬದುಕು ಮುನ್ನಡೆಸುವ ಮೌಲ್ಯಗಳೇ ಹೊರತು ಆಡಂಬರದ ಜೀವನವಲ್ಲ, ಗಾಂಧೀಜಿ ಯವರ ಮೌಲ್ಯ ಮರೆತ ದಿನ ಜಗತ್ತು ನಾಶವಾಗುತ್ತದೆ.

-ಪ್ರೊ.ಬಿ.ಶಿವರಾಜು, ಗಾಂಧಿವಾದಿ

[illegible] 05 ಡಿಸೆಂಬರ್ 2022 | ಸೋಮವಾರ | ಬೆಂಗಳೂರು

# ಜೈಲಿಗೆ ಹೋಗಿ ಬಂದವರಿಗೆ ಗೌರವ ಸಲ್ಲ



ಶ್ರೀ ಸರಸ್ವತಿ ಮತ್ತು ಶ್ರೀ ದತ್ತಾತ್ರೇಯ ಹಂಪಿಹೊಳಿ ಸ್ಮರಣಾರ್ಥ ಏರ್ಪಡಿಸಿದ್ದ ಸಂಗೀತ ಸಂಧ್ಯಾ ಕಾರ್ಯಕ್ರಮದಲ್ಲಿ ನ್ಯಾಯಮೂರ್ತಿ ಎನ್. ಸಂತೋಷ ಹೆಗ್ಡೆ, ಪ್ರೊಡೆ ಪಿ. ಕೃಷ್ಣ ಅವರನ್ನು ಪಂಡಿತ್ ಸತೀಶ್ ಹಂಪಿಹೊಳಿ ಸನ್ಮಾನಿಸಿ ಗೌರವಿಸಿದರು.

ಬೆಂಗಳೂರು: ಜೈಲಿಗೆ ಹೋಗಿ ಬಂದವರಿಗೆ ಹಾರ ಹಾಕಿ ಸ್ವಾಗತಿಸುವುದು ಒಳ್ಳೆಯ ಸಂಸ್ಕಾರವಲ್ಲ ಎಂದು ನ್ಯಾಯಮೂರ್ತಿ, ನಿವೃತ್ತ ಲೋಕಾಯುಕ್ತ ಎನ್. ಸಂತೋಷ ಹೆಗ್ಡೆ ಅಭಿಪ್ರಾಯಪಟ್ಟರು.

ಶ್ರೀ ದತ್ತಾತ್ರೇಯ ದೇವಸ್ಥಾನಂ ಟ್ರಸ್ಟ್, ಸತೀಶ್ ಹಂಪಿಹೊಳಿ ಮ್ಯೂಸಿಕ್ ಫೌಂಡೇಶನ್ ಟ್ರಸ್ಟ್ ಸಹಯೋಗದೊಂದಿಗೆ ಶ್ರೀ ಸರಸ್ವತಿ ಮತ್ತು ಶ್ರೀ ದತ್ತಾತ್ರೇಯ ಹಂಪಿಹೊಳಿ ಸ್ಮರಣಾರ್ಥ ಆಯೋಜಿಸಿದ್ದ ಸಂಗೀತ ಸಂಧ್ಯಾ ಕಾರ್ಯಕ್ರಮದಲ್ಲಿ ಭಾಗವಹಿಸಿ ಮಾತನಾಡಿದ ಅವರು, ಈಗಿನ ಸಂದರ್ಭದಲ್ಲಿ ಜೈಲಿಗೆ ಹೋಗಿ ಬಂದವರನ್ನು ಸ್ವಾಗತಿಸುವ ಪರಿಪಾಠವಿದೆ. ಇದು ಒಳ್ಳೆಯ ಬೆಳವಣಿಗೆಯಲ್ಲ. ಕೊರೊನಾ ಸೇರಿದಂತೆ ಇನ್ನಿತರ ಕಾಯಿಲೆಗಳಿಗೆ ಮದ್ದಿದೆ. ಆದರೆ, ದುರಾಸೆಗೆ ಮದ್ದಿಲ್ಲ. ಹಾಗಾಗಿ ಸಮಾಜವನ್ನು ತಿದ್ದುವ ಅವಶ್ಯಕತೆ ಇದೆ ಎಂದರು.

ಶಿಕ್ಷಣ ತಜ್ಞ ಪ್ರೊಡೆ ಪಿ. ಕೃಷ್ಣ ಮಾತನಾಡಿ ಸತೀಶ್ ಹಂಪಿಹೊಳಿ ಅವರಿಗೆ ಅಯಸ್ಕಾಂತ ಶಕ್ತಿ ಇದೆ. ತಾಯಿ, ಮಗ, ಗುರು ಶಿಷ್ಯ ಎಲ್ಲರೂ ವೇದಿಕೆ ಹಂಚಿಕೊಂಡು ಸಂಗೀತ ಕಾರ್ಯಕ್ರಮ ನಡೆಸಿರುವುದು ವಿಶೇಷ. ವ್ಯಕ್ತಿತ್ವದ ಸರ್ವಾಂಗೀಣ ಅಭಿವೃದ್ಧಿಗೆ ಕಲೆ ಮುಖ್ಯ. ತಂದೆ ತಾಯಿಯವರನ್ನು ಸ್ಮರಿಸುವುದು ಒಂದು ಒಳ್ಳೆಯ ಕಾರ್ಯಕ್ರಮ ಎಂದರು.

VIJAYAVANI BENGALURU



# ಜೈಲಿಗೆ ಹೋಗಿಬಂದವರಿಗೆ ಹಾರ ಹಾಕಿ ಸ್ವಾಗತ!

**ಬೆಂಗಳೂರು:** ಜೈಲಿಗೆ ಹೋಗಿಬಂದವರಿಗೆ ಹಾರ ಹಾಕಿ ಸ್ವಾಗತಿಸುವುದು ಒಳ್ಳೆಯ ಸಂಸ್ಕಾರವಲ್ಲ ಎಂದು ನಿವೃತ್ತ ನ್ಯಾಯಮೂರ್ತಿ ಸಂತೋಷ್ ಹೆಗ್ಡೆ ಹೇಳಿದ್ದಾರೆ.

**» ಸಂತೋಷ್ ಹೆಗ್ಡೆ ಬೇಸರ**

ಸತೀಶ್ ಹಂಪಿಹೊಳಿ ಮ್ಯೂಸಿಕ್ ಫೌಂಡೇಶನ್ ಟ್ರಸ್ಟ್ ಸಹಯೋಗದಲ್ಲಿ ಶ್ರೀ ದತ್ತಾತ್ರೇಯ ದೇವಸ್ಥಾನಂ ಟ್ರಸ್ಟ್, ಶ್ರೀ ಸರಸ್ವತಿ ಮತ್ತು ಶ್ರೀ ದತ್ತಾತ್ರೇಯ ಹಂಪಿಹೊಳಿ ಸ್ಮರಣಾರ್ಥ ಬಸವನಗುಡಿ ಶ್ರೀ ದತ್ತಾತ್ರೇಯ ದೇವಸ್ಥಾನದ ಆವರಣದಲ್ಲಿ ಭಾನುವಾರ ಆಯೋಜಿಸಿದ್ದ 'ಸಂಗೀತ ಸಂಧ್ಯಾ' ಕಾರ್ಯಕ್ರಮದಲ್ಲಿ ಭಾಗವಹಿಸಿ ಮಾತನಾಡಿದರು.

ಕೋವಿಡ್ ಸೇರಿ ಇನ್ನಿತರ ಕಾಯಿಲೆಗಳಿಗೆ ಮದ್ದು ಇದೆ. ಆದರೆ, ದುರಾಸೆಗೆ ಮದ್ದಿಲ್ಲ. ಆದ್ದರಿಂದ ಸಮಾಜವನ್ನು ತಿದ್ದುವುದು ಅವಶ್ಯಕ ಎಂದು ಸಂತೋಷ್ ಹೆಗ್ಡೆ ಅಭಿಪ್ರಾಯಪಟ್ಟರು.



ಬಸವನಗುಡಿಯ ಶ್ರೀ ದತ್ತಾತ್ರೇಯ ದೇವಸ್ಥಾನದ ಆವರಣದಲ್ಲಿ ಭಾನುವಾರ ಆಯೋಜಿಸಿದ್ದ 'ಸಂಗೀತ ಸಂಧ್ಯಾ' ಕಾರ್ಯಕ್ರಮದಲ್ಲಿ ಮಾಜಿ ಲೋಕಾಯುಕ್ತ ನ್ಯಾ.ಸಂತೋಷ್ ಹೆಗ್ಡೆ ಹಾಗೂ ಶಿಕ್ಷಣತಜ್ಞ ಡಾ. ವೂಡೇ ಪಿ. ಕೃಷ್ಣ ಅವರನ್ನು ಪಂಡಿತ್ ಸತೀಶ್ ಹಂಪಿಹೊಳಿ ಸನ್ಮಾನಿಸಿದರು.

ವಾರ್ತಾಜಾಲ ದ್ವಿಭಾಷಾ ದಿನಪತ್ರಿಕೆ

ಶನಿವಾರ ಡಿಸೆಂಬರ್ 03, 2022 Saturday December 03, 2022

# ವ್ಯಕ್ತಿತ್ವ ನಿರ್ಮಾಣವೇ ಶಿಕ್ಷಣದ ಮೂಲ ಆಶಯ ಆಗಬೇಕು



ಬೆಂಗಳೂರು: ವ್ಯಕ್ತಿತ್ವ ನಿರ್ಮಾಣವೇ ಶಿಕ್ಷಣದ ಮೂಲ ಆಶಯ ಆಗಬೇಕು ಎಂದುಕರ್ನಾಟಕಗಡಿಪ್ರದೇಶಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಡಾ.ಸಿ. ಸೋಮಶೇಖರ ಭಾ.ಆ.ಸೇ(ನಿ) ಅಭಿಪ್ರಾಯಪಟ್ಟರು ಇವರುದಿನಾಂಕ–1–12–2022ರಂದು ಶೇಷಾದ್ರಿಪುರಂ ಸಂಜೆ ಕಾಲೇಜು, ಪ್ರೇರಣಾ (ಆಂತರಿಕ ಗುಣಮಟ್ಟ ಭರವಸಾ ಸಮಿತಿ) ಮತ್ತು ಸಮರ್ಪಣ (ಶೇಷಾದ್ರಿಪುರಂ ಸಂಜೆ ಕಾಲೇಜಿನ ಹಿರಿಯ ವಿದ್ಯಾರ್ಥಿಗಳ ಸಂಘ) ಆಯೋಜಿಸಿದ್ದ 'ಪ್ರತಿಭಾ ಪುರಸ್ಕಾರ ಹಾಗೂ ಶೈಕ್ಷಣಿಕ ಸಾಧನಾ ಪುರಸ್ಕಾರ ಪ್ರದಾನ'ಮತ್ತು ವಿದ್ಯಾಲಯದ ಹೆಸರು ಮರುನಾಮಕರಣ ಸಮಾರಂಭವನ್ನು ಉದ್ಘಾಟಿಸಿ ಮಾತನಾಡುತ್ತಾಶಿಕ್ಷಣ ನಮ್ಮನ್ನು ವಿವೇಕವಂತರನ್ನಾಗಿಸಬೇಕು ವಿವೇಕ ವಂತರಾದ ವಿದ್ಯಾರ್ಥಿಗಳಿಗೆ ಸಂಕಲ್ಪ ಶಕ್ತಿ ಒಡ ಮೂಡುತ್ತದೆ.ಸಂಕಲ್ಪ ಶಕ್ತಿ ಇದ್ದಾಗ ಸಾಧನೆ ಸುಲಭವಾಗುತ್ತದೆ. ವಿದ್ಯಾರ್ಥಿಗಳು ತಮ್ಮ ಬದುಕಿನಲ್ಲಿ ಮೌಲ್ಯಗಳನ್ನು ಅಳವಡಿಸಿಕೊಂಡಾಗ ಮಾತ್ರ ಬುದ್ಧಿಶಕ್ತಿ ಹಾಗೂ ಆತ್ಮಶಕ್ತಿಯನ್ನು ವರ್ಧಿಸಿಕೊಳ್ಳಲು ಸಾಧ್ಯಎಂದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿಗಳಾದ ನಾಡೋಜಡಾ. ವೂಡೇ ಪಿ ಕೃಷ್ಣ ಅವರು ಮಾತನಾಡಿ ವಿದ್ಯಾರ್ಥಿಯ ಬದುಕಿಗೆ ದೂರದರ್ಶಿತ್ವ ಇರಬೇಕು ದೂರದರ್ಶಿತ್ವದ ಗುಣದೊಂದಿಗೆ ಪಡೆದ ಶಿಕ್ಷಣವು ಫಲ ಕೊಡುತ್ತದೆ, ಯಶಸ್ಸಿಗಾಗಿ ದುಡಿಯುವವರು ಅನೇಕರಿದ್ದಾರೆ ಆದರೆ ಮೌಲ್ಯಗಳಿಗಾಗಿ ದುಡಿಯುವವರು ವಿರಳವಾಗಿರುವ ಈ ಕಾಲಘಟ್ಟದಲ್ಲಿ ವಿದ್ಯಾರ್ಥಿಗಳು ಅಂಕಗಳ ಗಳಿಕೆಯೊಂದಿಗೆ ಮೌಲ್ಯಗಳಿಗಾಗಿ ದುಡಿಯಬೇಕು ಎಂದರು ಕಾರ್ಯಕ್ರಮದಲ್ಲಿ ಶೈಕ್ಷಣಿಕವಾಗಿ ಸಾಧನೆ ಮಾಡಿದ 95% ಗಿಂತಲೂ ಅತ್ಯಧಿಕ ಅಂಕಗಳಿಸಿದ 74ಜನ ಹಾಗೂ 90%ಗಿಂತಲೂ ಹೆಚ್ಚು ಅಂಕ ಗಳಿಸಿದ 72 ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ಹಾಗೂ ವಿಶ್ವವಿದ್ಯಾಲಯ ಪರೀಕ್ಷೆಗಳಲ್ಲಿ ವಿವಿಧ ವಿಷಯಗಳಲ್ಲಿ ಅತೀಹೆಚ್ಚು ಅಂಕಗಳಿಸಿದ ಒಟ್ಟು 204 ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಸಾಧನಾ ಪುರಸ್ಕಾರ ನೀಡಿ ಗೌರವಿಸಲಾಯಿತು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಉಪಾಧ್ಯಕ್ಷರಾದ ಶ್ರೀ ಟಿ.ಎಸ್. ಹೆಂಜಾರಪ್ಪ, ಸಹಾಯಕ ಕಾರ್ಯದರ್ಶಿಗಳಾದ ಶ್ರೀ ಎಂ.ಎಸ್.ನಟರಾಜ್, ಧರ್ಮದರ್ಶಿಗಳಾದ ಶ್ರೀ ಡಬ್ಲ್ಯು.ಡಿ ಅಶೋಕ್, ಶ್ರೀ ಕೃಷ್ಣಸ್ವಾಮಿ.ಕೆ, ಶ್ರೀ ಪರಮ ಶಿವಯ್ಯ ಹಾಗೂ ಶೇಷಾದ್ರಿಪುರಂ ಸಂಜೆ ಕಾಲೇಜಿನ ಆಡಳಿತ ಸಲಹಾ ಮಂಡಳಿಯ ಅಧ್ಯಕ್ಷರಾದ ಶ್ರೀ ಪಿ.ಸಿ.ನಾರಾಯಣ, ಪ್ರಾಂಶುಪಾಲರಾದ ಪ್ರೊ.ಎನ್.ಎಸ್.ಸತೀಶ್, ಸಮರ್ಪಣ ಅಧ್ಯಕ್ಷರಾದ ಶ್ರೀ ಜಿ.ಯೋಗೇಶ್, ಪ್ರೇರಣಾ ಸಂಯೋಜಕರಾದ ನಾಗಸುಧಾ.ಆರ್ ಹಾಗೂ ಕಾಲೇಜಿನಎಲ್ಲಾ ಪ್ರಾಧ್ಯಾಪಕರುಗಳು ಹಾಗೂ ವಿದ್ಯಾರ್ಥಿಗಳು ಭಾಗವಹಿಸಿದ್ದರು.

ಸಂಯುಕ್ತ ಕರ್ನಾಟಕ 3 ಡಿಸೆಂಬರ್ 2022 | ಶನಿವಾರ | ಬೆಂಗಳೂರು

# ಶಿಕ್ಷಣದಿಂದಲೇ ವ್ಯಕ್ತಿತ್ವ ನಿರ್ಮಾಣ



ಶೇಷಾದ್ರಿಪುರ ಸಂಜೆ ಕಾಲೇಜಿನಲ್ಲಿ ಹಿರಿಯ ವಿದ್ಯಾರ್ಥಿಗಳ ಸಂಘದ ವತಿಯಿಂದ ಏರ್ಪಡಿಸಲಾಗಿದ್ದ ಪ್ರತಿಭಾ ಪುರಸ್ಕಾರ ಸಮಾರಂಭದಲ್ಲಿ ಹೆಚ್ಚು ಅಂಕಗಳಿಸಿದ ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ನೀಡಿ ಗೌರವಿಸಲಾಯಿತು.

ಸಂ.ಕ.ಸಮಾಚಾರ, ಬೆಂಗಳೂರು

ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ನಿರ್ಮಾಣವೇ ಶಿಕ್ಷಣದ ಮೂಲ ಆಶಯವಾಗಬೇಕೆಂದು ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ.ಸಿ.ಸೋಮಶೇಖರ್ ಅಭಿಪ್ರಾಯಪಟ್ಟರು.

ಶೇಷಾದ್ರಿಪುರ ಸಂಜೆ ಕಾಲೇಜಿನಲ್ಲಿ ಹಿರಿಯ ವಿದ್ಯಾರ್ಥಿಗಳ ಸಂಘದ ವತಿಯಿಂದ ಏರ್ಪಡಿಸಲಾಗಿದ್ದ ಪ್ರತಿಭಾ ಪುರಸ್ಕಾರ ಸಮಾರಂಭವನ್ನು ಉದ್ಘಾಟಿಸಿ ಮಾತನಾಡಿದ ಅವರು, ವಿದ್ಯಾರ್ಥಿಗಳು ತಮ್ಮ ಬದುಕಿನಲ್ಲಿ ಮೌಲ್ಯಗಳನ್ನು ಅಳವಡಿಸಿಕೊಂಡಾಗ ಮಾತ್ರ, ಬುದ್ಧಿಶಕ್ತಿ ಹಾಗೂ ಆತ್ಮಶಕ್ತಿಯ ವೃದ್ಧಿಯಾಗುತ್ತದೆ. ಇದೆಲ್ಲ ಶಿಕ್ಷಣದಿಂದ ಮಾತ್ರ ಸಾಧ್ಯ ಎಂದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ವಿದ್ಯಾರ್ಥಿಯ ಬದುಕಿಗೆ ದೂರದರ್ಶಿತ್ವ ಇರಬೇಕು. ದೂರದರ್ಶಿತ್ವ ಗುಣದೊಂದಿಗೆ ಪಡೆದ ಶಿಕ್ಷಣವು ಮುಂದೆ ಫಲ ಕೊಡುತ್ತದೆ ಎಂದು ತಿಳಿಸಿದರು.

ಇದೇ ವೇಳೆ ಶೈಕ್ಷಣಿಕವಾಗಿ ಸಾಧನೆ ಮಾಡಿದಂತಹ ವಿದ್ಯಾರ್ಥಿಗಳನ್ನು ಸನ್ಮಾನಿಸಿ ಗೌರವಿಸಲಾಯಿತು. ಶೇ.95 ಕ್ಕಿಂತ ಅತ್ಯಧಿಕ ಅಂಕಗಳಿಸಿದ 74 ಹಾಗೂ ಶೇ.90ಕ್ಕಿಂತ ಹೆಚ್ಚು ಅಂಕಗಳಿಸಿದ 72 ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ಹಾಗೂ ವಿಶ್ವವಿದ್ಯಾಲಯ ಪರೀಕ್ಷೆಗಳಲ್ಲಿ ವಿವಿಧ ವಿಷಯಗಳಲ್ಲಿ ಅತೀ ಹೆಚ್ಚು ಅಂಕಗಳಿಸಿದ ಒಟ್ಟು 204 ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಸಾಧನಾ ಪುರಸ್ಕಾರವನ್ನು ನೀಡಲಾಯಿತು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಉಪಾಧ್ಯಕ್ಷ ಟಿ.ಎಸ್.ಹೆಂಜಾರಪ್ಪ, ಸಹಾಯಕ ಕಾರ್ಯದರ್ಶಿ ಎಂ.ಎಸ್.ನಟರಾಜ್, ಧರ್ಮದರ್ಶಿ ಡಬ್ಲ್ಯೂ.ಡಿ. ಅಶೋಕ್, ಕೃಷ್ಣಸ್ವಾಮಿ.ಕೆ, ಪರಮಶಿವಯ್ಯ, ಕಾಲೇಜಿನ ಆಡಳಿತ ಸಲಹಾ ಮಂಡಳಿಯ ಅಧ್ಯಕ್ಷ ಪಿ.ಸಿ.ನಾರಾಯಣ, ಪ್ರಾಂಶುಪಾಲ ಪ್ರೊ.ಎನ್.ಎಸ್.ಸತೀಶ್, ಸಮರ್ಪಣ ಅಧ್ಯಕ್ಷ ಜಿ.ಯೋಗೇಶ್, ಪ್ರೇರಣಾ ಸಂಯೋಜಕ ನಾಗಸುಧಾ.ಆರ್ ಸೇರಿದಂತೆ ಮತ್ತಿತರರಿದ್ದರು.

ಪ್ರಜಾ  ಪ್ರಗತಿ

Dec 3, 2022

# ಡಾ.ವೂಡೇ ಪಿ. ಕೃಷ್ಣರಿಂದ ಬೆಸ್ಟ್ ರೆಡ್ ರಿಬ್ಬನ್ ಕಾಲೇಜ್ ಪ್ರಶಸ್ತಿ ಸ್ವೀಕಾರ

■ ಪ್ರಜಾಪ್ರಗತಿ.ಕಾಂ



ವಿಜಯಪುರ : ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿಗೆ ಕರ್ನಾಟಕ ರಾಜ್ಯ ಏಡ್ಸ್ ಪ್ರಿವೆನ್ಷನ್ ಜಿಲ್ಲಾ ಏಡ್ಸ್ ತಡೆಗಟ್ಟುವ ಮತ್ತು ನಿಯಂತ್ರಣ ಘಟಕ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಕರ್ನಾಟಕ ಸರ್ಕಾರ ವತಿಯಿಂದ 2021- 22ನೇ ಸಾಲಿನ ಬೆಂಗಳೂರಿನ ಅತ್ಯುತ್ತಮ ರೆಡ್ ರಿಬ್ಬನ್ ಕಾಲೇಜು ಪ್ರಶಸ್ತಿಯನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿಯು ಗೌರವ ಪ್ರಧಾನ ಕಾರ್ಯದರ್ಶಿ ನಾಡುಜ ಡಾ.ವೂಡೇ ಪಿ. ಕೃಷ್ಣ ರವರು ಸ್ವೀಕರಿಸಿದ್ದರು.

ಕಾಲೇಜಿನ ರೆಡ್ ರಿಬ್ಬನ್ ಕ್ಲಬ್ ನ ವತಿಯಿಂದ ರಾಷ್ಟ್ರೀಯ ಸೇವಾ ಯೋಜನೆ ಸಹಯೋಗದೊಂದಿಗೆ ಹಮ್ಮಿಕೊಂಡಿರುವ ಎಚ್‌ಐವಿ ಏಡ್ಸ್ ನಿಯಂತ್ರಣ, ಪ್ರಬಂಧ ಸ್ಪರ್ಧೆ, ಚರ್ಚಾಸ್ಪರ್ಧೆ, ರಕ್ತದಾನ ಶಿಬಿರಗಳು, ಕೋವಿಡ್ ಲಸಿಕೆ ಅಭಿಯಾನ, ಹೆಚ್‌ಐವಿ ಏಡ್ಸ್ ಕುರಿತು ಜಾಗೃತಿ ಕಾರ್ಯಕ್ರಮಗಳು, ಯುವ ದಿನಾಚರಣೆ ರಾಷ್ಟ್ರೀಯ ರಕ್ತದಾನಿಗಳ ದಿನಾಚರಣೆ ಹತ್ತು ಹಲವಾರು ಕಾರ್ಯಕ್ರಮಗಳನ್ನು ಗುರುತಿಸಿ ಪ್ರಶಸ್ತಿಗೆ ಗುರುತಿಸಲಾಗಿದೆ.

ಈ ಸಂದರ್ಭದಲ್ಲಿ ಹೆಚ್‌ಐವಿ ಏಡ್ಸ್ ನ ಕುರಿತು ಜಾಗೃತಿ ಜಾಥಾ ಕಾರ್ಯಕ್ರಮವನ್ನು ಯಲಹಂಕದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಮತ್ತು ರೆಡ್ ರಿಬ್ಬನ್ ಕ್ಲಬ್ ನ ವತಿಯಿಂದ ಸಾರ್ವಜನಿಕ ಪ್ರದೇಶಗಳಲ್ಲಿ ಜಾಗೃತಿ ಜಾಥಾವನ್ನು ಹಮ್ಮಿಕೊಳ್ಳಲಾಗಿತ್ತು.

ಪ್ರಶಸ್ತಿ ಪ್ರಧಾನ ಸಮಾರಂಭದಲ್ಲಿ ಬೆಂಗಳೂರು ನಗರ ಜಿಲ್ಲೆಯ ಅಂಗವಿಕಲರ ಪುನರ್ವಸತಿ ಕೇಂದ್ರದ ಸದಸ್ಯ ಕಾರ್ಯದರ್ಶಿ ರಾಜು ಚಂದ್ರಶೇಖರ್, ಬೆಂಗಳೂರು ನಗರ ವಿಶ್ವವಿದ್ಯಾಲಯದ ಎನ್ .ಎಸ್. ಎಸ್ ಸಂಯೋಜನಾಧಿಕಾರಿ ಡಾ. ಗೋವಿಂದಗೌಡ , ಬಿ.ಎ.ಬಿಂ.ಸಿ.ಯ ಮಾಜಿ ವೈಜ್ಞಾನಿಕ ಅಧಿಕಾರಿ ವೇಣುಗೋಪಾಲ್, ಜಿಲ್ಲಾ ಏಡ್ಸ್ ತಡೆಗಟ್ಟುವ ಮತ್ತು ನಿಯಂತ್ರಣ ಮಂಡಳಿಯ ಮೇಲ್ವಿಚಾರಕ ಹನುಮಂತರಾಯ, ಕಾಲೇಜಿನ ಪ್ರಾಂಶುಪಾಲರಾದ ಡಾ. ಎಸ್ .ಎನ್ ವೆಂಕಟೇಶ್, ಎನ್‌ಎಸ್‌ಎಸ್ ಮತ್ತು ಆರ್ ಆರ್ ಸಿ ಅಧಿಕಾರಿ ನವೀನ್ ಕುಮಾರ್ ಕೆ. , ಬಿಬಿಎಂಪಿ ಸಿಬ್ಬಂದಿ ವರ್ಗ, ಸ್ವಯಂಸೇವಕರು ಹಾಜರಿದ್ದರು.

## ಜಾಗೃತಿ ಜಾಥಾ

ಈ ಸಂದರ್ಭದಲ್ಲಿ ಹೆಚ್‌ಐವಿ ಏಡ್ಸ್ ನ ಕುರಿತು ಜಾಗೃತಿ ಜಾಥಾ ಕಾರ್ಯಕ್ರಮವನ್ನು ಯಲಹಂಕದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಮತ್ತು ರೆಡ್ ರಿಬ್ಬನ್ ಕ್ಲಬ್ ನ ವತಿಯಿಂದ ಸಾರ್ವಜನಿಕ ಪ್ರದೇಶಗಳಲ್ಲಿ ಜಾಗೃತಿ ಜಾಥಾವನ್ನು ಹಮ್ಮಿಕೊಳ್ಳಲಾಗಿತ್ತು.

ದೆಹಲಿ ವಾರ್ತೆ

ಡಿಸೆಂಬರ್ 2, 2022, ಶುಕ್ರವಾರ

# ವ್ಯಕ್ತಿತ್ವ ನಿರ್ಮಾಣವೇ ಶಿಕ್ಷಣದ ಮೂಲ ಆಶಯವಾಗಲಿ: ಡಾ.ಸಿ. ಸೋಮಶೇಖರ್

ಬೆಂಗಳೂರು: ಡಿ.01: ವ್ಯಕ್ತಿತ್ವ ನಿರ್ಮಾಣವೇ ಶಿಕ್ಷಣದ ಮೂಲ ಆಶಯ ಆಗಬೇಕು ಎಂದು ಕರ್ನಾಟಕ ಗಡಿಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಡಾ.ಸಿ.ಸೋಮಶೇಖರ ಭಾ.ಆ.ಸೇ(ನಿ) ಅಭಿಪ್ರಾಯಪಟ್ಟರು ಇವರು ದಿನಾಂಕ-1-12-2022 ರಂದು ಶೇಷಾದ್ರಿಪುರಂ ಸಂಜೆ ಕಾಲೇಜು, ಪ್ರೇರಣಾ (ಆಂತರಿಕ ಗುಣಮಟ್ಟ ಭರವಸಾ ಸಮಿತಿ) ಮತ್ತು ಸಮರ್ಪಣಾ (ಶೇಷಾದ್ರಿಪುರಂ ಸಂಜೆ ಕಾಲೇಜಿನ ಹಿಂದಿನ ವಿದ್ಯಾರ್ಥಿಗಳ ಸಂಘ) ಆಯೋಜಿಸಿದ್ದ 'ಪ್ರತಿಭಾ ಪುರಸ್ಕಾರ ಹಾಗೂ ಶೈಕ್ಷಣಿಕ ಸಾಧನಾ ಪುರಸ್ಕಾರ ಪ್ರದಾನ' ಮತ್ತು ವಿದ್ಯಾಲಯದ ಹೆಸರು ಮರುನಾಮಕರಣ ಸಮಾರಂಭವನ್ನು ಉದ್ಘಾಟಿಸಿ ಮಾತನಾಡುತ್ತಾ ಶಿಕ್ಷಣ ನಮ್ಮನ್ನು ವಿವೇಕವಂತರನ್ನಾಗಿಸಬೇಕು ವಿವೇಕವಂತರಾದ ವಿದ್ಯಾರ್ಥಿಗಳಿಗೆ ಸಂಕಲ್ಪಶಕ್ತಿ ಒದಗಿಬರುತ್ತದೆ.ಸಂಕಲ್ಪಶಕ್ತಿ ಇದ್ದಾಗ ಸಾಧನೆ ಸುಲಭವಾಗುತ್ತದೆ. ವಿದ್ಯಾರ್ಥಿಗಳು ತಮ್ಮ ಬದುಕಿನಲ್ಲಿ ಮೌಲ್ಯಗಳನ್ನು ಅಳವಡಿಸಿಕೊಂಡಾಗ



ಮಾತ್ರ ಬುದ್ಧಿಶಕ್ತಿ ಹಾಗೂ ಆತ್ಮಶಕ್ತಿಯನ್ನು ವರ್ಧಿಸಿಕೊಳ್ಳಲು ಸಾಧ್ಯ ಎಂದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಶೇಷಾದ್ರಿಪುರಂ ಶಿಕ್ಷಣದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿಗಳಾದ ನಾಡೋಜ ಡಾ.ವೂಡೇ ಪಿ ಕೃಷ್ಣ ಅವರು ಮಾತನಾಡಿ ವಿದ್ಯಾರ್ಥಿಯ ಬದುಕಿಗೆ ದೂರದರ್ಶಿತ್ವ ಇರಬೇಕು ದೂರದರ್ಶಿತ್ವದ ಗುಣದೊಂದಿಗೆ ಪಡೆದ ಶಿಕ್ಷಣವು ಫಲಕೊಡುತ್ತದೆ. ಯಶಸ್ಸಿಗಾಗಿ ದುಡಿಯುವವರು ಅನೇಕರಿದ್ದಾರೆ ಆದರೆ ಮೌಲ್ಯಗಳಿಗಾಗಿ ದುಡಿಯುವವರು ವಿರಳವಾಗಿರುವ ಈ ಕಾಲಘಟ್ಟದಲ್ಲಿ ವಿದ್ಯಾರ್ಥಿಗಳು ಅಂಕಗಳ ಗಳಿಕೆಯೊಂದಿಗೆ ಮೌಲ್ಯಗಳಿಗಾಗಿ ದುಡಿಯಬೇಕು ಎಂದರು ಕಾರ್ಯಕ್ರಮದಲ್ಲಿ ಶೈಕ್ಷಣಿಕವಾಗಿ ಸಾಧನೆ ಮಾಡಿದ 95% ಗಿಂತಲೂ ಅಧಿಕ ಅಂಕಗಳಿಸಿದ 74 ಜನ ಹಾಗೂ 90% ಗಿಂತಲೂ ಹೆಚ್ಚು ಅಂಕ ಗಳಿಸಿದ 72 ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ಹಾಗೂ ವಿಶ್ವವಿದ್ಯಾಲಯ ಪರೀಕ್ಷೆಗಳಲ್ಲಿ ವಿವಿಧ ವಿಷಯಗಳಲ್ಲಿ ಅತೀ ಹೆಚ್ಚು ಅಂಕಗಳಿಸಿದ ಒಟ್ಟು 204 ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಸಾಧನಾ ಪುರಸ್ಕಾರ ನೀಡಿ ಗೌರವಿಸಲಾಯಿತು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಉಪಾಧ್ಯಕ್ಷರಾದ ಟಿ.ಎಸ್.ಹಂಪಾರಪ್ಪ, ಸಹಾಯಕ ಕಾರ್ಯದರ್ಶಿಗಳಾದ ಎಂ.ಎಸ್.ನಟರಾಜ್, ಧರ್ಮದರ್ಶಿಗಳಾದ ಶ್ರೀ ವುಡ್ಲಿ ಪಿ ಅಶೋಕ್, ಕೃಷ್ಣಸ್ವಾಮಿ. ಕೆ, ಶ್ರೀ ಪರಮಶಿವಯ್ಯ ಹಾಗೂ ಶೇಷಾದ್ರಿಪುರಂ ಸಂಜೆ ಕಾಲೇಜಿನ ಆಡಳಿತ ಸಲಹಾ ಮಂಡಳಿಯ ಅಧ್ಯಕ್ಷರಾದ ಪಿ.ಸಿ.ನಾರಾಯಣ, ಪ್ರಾಂಶುಪಾಲರಾದ ಪ್ರೊ.ಎನ್.ಎಸ್.ಸತೀಶ್, ಸಮರ್ಪಣ ಅಧ್ಯಕ್ಷರಾದ ಜಿತೇಂದ್ರ, ಪ್ರೇರಣಾ ಸಂಚಾಲಕ [illegible] ಆರ್ ಹಾಗೂ ಕಾಲೇಜಿನ ಎಲ್ಲಾ ಪ್ರಾಧ್ಯಾಪಕರುಗಳು ಹಾಗೂ ವಿದ್ಯಾರ್ಥಿಗಳು ಭಾಗವಹಿಸಿದ್ದರು.

ಪ್ರಜಾವಾಣಿ

Dec 18 2022

# 'ಗಾಂಧೀಜಿ ಅನುಕರಿಸಬೇಡಿ, ಅನುಸರಿಸಿ'

ಪ್ರಜಾವಾಣಿ ವಾರ್ತೆ

ಮೈಸೂರು: 'ಮಹಾತ್ಮ ಗಾಂಧೀಜಿಯನ್ನು ಅನುಕರಣೆ ಮಾಡುವ ಬದಲು ಅವರ ತತ್ವ, ವಿಚಾರಗಳನ್ನು ಅನುಸರಿಸಬೇಕು' ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಸಲಹೆ ನೀಡಿದರು.

ಇಲ್ಲಿನ ನಟರಾಜ ಶಿಕ್ಷಣ ಸಂಸ್ಥೆಗಳ ವತಿಯಿಂದ ಶನಿವಾರ ನಡೆದ 'ಶರಣ ಜ್ಯೋತಿ ಪ್ರಸಾರಾಂಗ' ಉದ್ಘಾಟನೆ, ಡಾ.ಎಸ್.ಶಿವರಾಜಪ್ಪ ವಿರಚಿತ 'ಗಾಂಧಿ ರಸಪ್ರಶ್ನೆಗಳು ಮತ್ತು ಭಜನ್ಸ್' ಗ್ರಂಥ ಬಿಡುಗಡೆ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

'ಯುವಜನರು ರಾಜಕೀಯವನ್ನು ಗಂಭೀರವಾಗಿ ಪರಿಗಣಿಸಬೇಕು. ಒಳ್ಳೆಯ ಜನರು ರಾಜಕೀಯಕ್ಕೆ ಬರಬೇಕು. ವೈಯಕ್ತಿಕ ಕೆಲಸಗಳನ್ನು ಮಾಡುವ ಜೊತೆಗೆ ಸಮಾಜಮುಖಿ ಕೆಲಸದಲ್ಲೂ ತೊಡಗಬೇಕು. ಸ್ವಾವಲಂಬನೆಯ ಚಿಂತನೆಯನ್ನು ಇಟ್ಟುಕೊಂಡು ರಚನಾತ್ಮಕ ಕೆಲಸಗಳನ್ನು ಮಾಡಿದ ಗಾಂಧೀಜಿಯ ದಾರಿಯಲ್ಲಿ ಎಲ್ಲರೂ ಸಾಗಬೇಕು' ಎಂದರು.

'ಶರಣ ಜ್ಯೋತಿ ಪ್ರಸಾರಾಂಗ' ಉದ್ಘಾಟಿಸಿದ ವಿಧಾನ ಪರಿಷತ್ ಸದಸ್ಯ ಎ.ಎಚ್.ವಿಶ್ವನಾಥ್, 'ಶಿಕ್ಷಣ ಸಂಸ್ಥೆಯು ಪ್ರಸಾರಾಂಗವನ್ನು ಆರಂಭಿಸುವುದು ಸುಲಭದ ಕೆಲಸವಲ್ಲ. ಅದನ್ನು ನಟರಾಜ ಸಂಸ್ಥೆ ಮಾಡಿರುವುದು ಶ್ಲಾಘನೀಯವಾಗಿದೆ' ಎಂದರು.



ಮೈಸೂರಿನಲ್ಲಿ ಡಾ.ಎಸ್.ಶಿವರಾಜಪ್ಪ ವಿರಚಿತ 'ಗಾಂಧಿ ರಸಪ್ರಶ್ನೆಗಳು ಮತ್ತು ಭಜನ್ಸ್' ಗ್ರಂಥವನ್ನು ವಿಧಾನ ಪರಿಷತ್ ಸದಸ್ಯ ಎ.ಎಚ್.ವಿಶ್ವನಾಥ್ ಶನಿವಾರ ಬಿಡುಗಡೆ ಮಾಡಿದರು. ಎಲ್.ಶಿವಲಿಂಗಪ್ಪ, ಡಾ.ಎಸ್.ಶಿವರಾಜಪ್ಪ, ಡಾ.ವೂಡೇ ಪಿ.ಕೃಷ್ಣ, ಚಿದಾನಂದ ಸ್ವಾಮೀಜಿ, ಎಂ.ಚಂದ್ರಶೇಖರ್ ಮತ್ತು ಪ್ರಸಾದ್ ಮೂರ್ತಿ ಇದ್ದಾರೆ

## 'ಸಣ್ಣ ಕೃತಿಗಳ ಪ್ರಕಟಣೆ'

ಅಧ್ಯಕ್ಷತೆ ವಹಿಸಿದ್ದ ನಟರಾಜ ಪ್ರತಿಷ್ಠಾನದ ವಿಶೇಷಾಧಿಕಾರಿ ಪ್ರೊ.ಎಸ್. ಶಿವರಾಜಪ್ಪ ಮಾತನಾಡಿ, 'ಶರಣ ಜ್ಯೋತಿ ಪ್ರಸಾರಾಂಗದ ಮೂಲಕ ಶರಣರ ಚಿಂತನೆಗಳ ಪ್ರಸಾರದೊಂದಿಗೆ ವಿದ್ಯಾರ್ಥಿಗಳಿಗೆ ಸಹಕಾರಿಯಾಗುವ ಪುಸ್ತಕಗಳನ್ನು ಪ್ರಕಟಿಸುವ ಆಲೋಚನೆ ಇದೆ. ವರ್ಷಕ್ಕೆ 25ರಿಂದ 50 ಸಣ್ಣ ಕೃತಿಗಳನ್ನು ಹೊರತರುವ ಉದ್ದೇಶವಿದೆ' ಎಂದು ತಿಳಿಸಿದರು.

'ಶರಣ ಜ್ಯೋತಿ ಪ್ರಸಾರಾಂಗ'ದ ಲಾಂಛನ ಬಿಡುಗಡೆ ಮಾಡಿದ ವಿಧಾನ ಪರಿಷತ್ ಸದಸ್ಯ ಸಿ.ಎನ್. ಮಂಜೇಗೌಡ ಮಾತನಾಡಿ, 'ನೆಲ, ಜಲ, ಗಾಳಿ, ಹೇಗೆ ನಮಗೆ ಅತ್ಯವಶ್ಯವೋ ಹಾಗೆಯೇ ಮಹಾತ್ಮ ಗಾಂಧಿಯ ತತ್ವ-ಆದರ್ಶಗಳೂ ಮತ್ತು ಅವಕಾಶಗಳನ್ನು ಬಳಸಿಕೊಂಡು ಸನ್ನಡತೆಯಿಂದ ಬದುಕಬೇಕು. ಹೀಗೆ ಬದುಕುವುದನ್ನು ಕಲಿಯಲು ಪುಸ್ತಕಗಳನ್ನು ಓದಬೇಕು. ಮೌಲ್ಯಗಳನ್ನು ಪಾಲಿಸಬೇಕು' ಎಂದು ಸಲಹೆ ನೀಡಿದರು.

'ಗಾಂಧಿ ರಸಪ್ರಶ್ನೆಗಳು ಮತ್ತು ಭಜನ್ಸ್' ಪುಸ್ತಕ ಕುರಿತು ಮಾತನಾಡಿದ ಚಿತ್ರ ಕಲಾವಿದ ಎಲ್. ಶಿವಲಿಂಗಪ್ಪ, 'ಗ್ರಂಥವು 1,200ಕ್ಕೂ ಹೆಚ್ಚು ಪ್ರಶ್ನೆಗಳನ್ನು ಒಳಗೊಂಡಿದೆ. ವಿದ್ಯಾರ್ಥಿಗಳಿಗೆ ಹಾಗೂ ಸ್ಪರ್ಧಾತ್ಮಕ ಪರೀಕ್ಷೆ ತೆಗೆದುಕೊಳ್ಳುವವರಿಗೆ ಉಪಯುಕ್ತವಾಗಿದೆ' ಎಂದರು.

ಕನ್ನಡ ಸಾಹಿತ್ಯ ಕಲಾಕೂಟದ ಅಧ್ಯಕ್ಷ ಎಂ.ಚಂದ್ರಶೇಖರ್ ಮಾತನಾಡಿದರು. ಹೊಸಮಠದ ಅಧ್ಯಕ್ಷ ಚಿದಾನಂದ ಸ್ವಾಮೀಜಿ ಅಧ್ಯಕ್ಷತೆ ವಹಿಸಿದ್ದರು. ನಟರಾಜ ಮಹಿಳಾ ಪದವಿ ಪೂರ್ವ ಕಾಲೇಜು ಪ್ರಾಂಶುಪಾಲೆ. ಸುನೀತಾ ರಾಣಿ ವಿ.ಡಿ., ರಾಧಾ ಬಿ. ಇದ್ದರು.

# ರಾಷ್ಟ್ರದರಿವು ಮೂಡಿಸಲು ಶಿಕ್ಷಣ ಸಂಸ್ಥೆ ಸಹಕಾರಿ

## ವಿಧಾನ ಪರಿಷತ್ ಸದಸ್ಯ ಎಚ್.ವಿಶ್ವನಾಥ್ | ನಟರಾಜ ಶಿಕ್ಷಣ ಸಂಸ್ಥೆಯಲ್ಲಿ ಶರಣ ಜ್ಯೋತಿ ಪ್ರಸಾರಾಂಗ ಉದ್ಘಾಟನೆ

• ಕನ್ನಡಪ್ರಭ ವಾರ್ತೆ ಮೈಸೂರು

ನಗರದ ನಟರಾಜ ಶಿಕ್ಷಣ ಸಂಸ್ಥೆಗಳ ವತಿಯಿಂದ ಶರಣ ಜ್ಯೋತಿ ಪ್ರಸಾರಾಂಗ ಉದ್ಘಾಟನಾ ಕಾರ್ಯಕ್ರಮ ಹಾಗೂ ಡಾ. ಎಸ್. ಶಿವರಾಜಪ್ಪ ವಿರಚಿತ ಗಾಂಧಿ ರಸಪ್ರಶ್ನೆಗಳು ಮತ್ತು ಭಜನ್ಸ್ ಗ್ರಂಥ ಲೋಕಾರ್ಪಣಾ ಸಮಾರಂಭವನ್ನು ವಿಧಾನ ಪರಿಷತ್ ಸದಸ್ಯ ಎಚ್. ವಿಶ್ವನಾಥ್ ಉದ್ಘಾಟಿಸಿದರು.

ನಂತರ ಅವರು ಮಾತನಾಡಿ, ಒಂದು ಶಿಕ್ಷಣ ಸಂಸ್ಥೆ ಪ್ರಸಾರಾಂಗವನ್ನು ನಿರ್ಮಾಣ ಮಾಡುವುದು ಅಷ್ಟು ಸುಲಭದ ಕೆಲಸವಲ್ಲ. ಅಂತಹ ಒಂದು ಕೆಲಸವನ್ನು ಶ್ರೀ ನಟರಾಜ ಸಂಸ್ಥೆ ಮಾಡಿದೆ ಇದು ಶ್ಲಾಘನೀಯ. ಜನತಂತ್ರ ವ್ಯವಸ್ಥೆಯಲ್ಲಿ ಬದುಕುತ್ತಿರುವ ನಾವು ರಾಷ್ಟ್ರದ ಬಗ್ಗೆ ತಿಳಿಯಬೇಕು. ಇದರಲ್ಲಿ ಸರ್ಕಾರದ ಜೊತೆಗೆ ಶಿಕ್ಷಣ ಸಂಸ್ಥೆಗಳ ಪಾತ್ರ ದೊಡ್ಡದು. ರಾಜಕಾರಣ, ರಾಜಕಾರಣಿ, ರಾಜಕೀಯವನ್ನು ಸಕಾರಾತ್ಮಕ ನೆಲೆಯಲ್ಲಿ ನೋಡಬೇಕೇ ಹೊರತು ನಕಾರಾತ್ಮಕ ದೃಷ್ಟಿಯಿಂದ ನೋಡಬಾರದು. ಗಾಂಧಿ, ಅಂಬೇಡ್ಕರ್, ಕುವೆಂಪು ಮೊದಲಾದವರ ಕೃತಿಗಳನ್ನು ಬಿಡುಗಡೆ ಮಾಡುತ್ತಿರುವುದು ಸ್ವಾಗತಾರ್ಹ. ಸಮಾಜ ಮೆಚ್ಚುವ ಕೆಲಸ ಇದಾಗಿದೆ. ಉಳಿದವರಿಗೆ ಇದು



ಮೈಸೂರಿನ ಶ್ರೀ ನಟರಾಜ ಶಿಕ್ಷಣ ಸಂಸ್ಥೆಗಳ ವತಿಯಿಂದ ಶರಣ ಜ್ಯೋತಿ ಪ್ರಸಾರಾಂಗ ಉದ್ಘಾಟನಾ ಕಾರ್ಯಕ್ರಮ ಹಾಗೂ ಡಾ. ಎಸ್. ಶಿವರಾಜಪ್ಪ ವಿರಚಿತ ಗಾಂಧಿ ರಸಪ್ರಶ್ನೆಗಳು ಮತ್ತು ಭಜನ್ಸ್ ಗ್ರಂಥ ಲೋಕಾರ್ಪಣಾ ಸಮಾರಂಭವನ್ನು ವಿಧಾನ ಪರಿಷತ್ ಸದಸ್ಯ ಎಚ್. ವಿಶ್ವನಾಥ್ ಉದ್ಘಾಟಿಸಿದರು.

ಮಾದರಿಯಾಗಲೆಂದು ಆಶಿಸುತ್ತೇನೆ ಎಂದು ಹೇಳಿದರು.

ಶರಣ ಜ್ಯೋತಿ ಪ್ರಸಾರಾಂಗದ ಲಾಂಛನವನ್ನು ವಿಧಾನ ಪರಿಷತ್ ಸದಸ್ಯ ಸಿ.ಎನ್. ಮಂಜೇಗೌಡ ಅನಾವರಣ ಮಾಡಿ ಮಾತನಾಡಿ, ಬದುಕು ಎಲ್ಲವನ್ನು ಕಲಿಸುತ್ತದೆ. ನೆಲ, ಜಲ, ಗಾಳಿ, ಹೇಗೆ ನಮಗೆಅತ್ಯವಶ್ಯಕವೋ ಮಹಾತ್ಮಗಾಂಧಿಜೀಯವರ ತತ್ವ ಆದರ್ಶಗಳು ಅಷ್ಟೇ ಮುಖ್ಯ. ಅದೃಷ್ಟ ಹಣೆ ಬರಹವನ್ನು ನಂಬುವ ಬದಲು ಅವಕಾಶಗಳನ್ನು ಬಳಸಿಕೊಂಡು ಸನ್ನಡತೆಯಲ್ಲಿ ಬದುಕಲು ಕಲಿಯಬೇಕು ಎಂದರು.

ಚಿತ್ರ ಕಲಾವಿದ ಎಲ್. ಶಿವಲಿಂಗಪ್ಪ ಅವರು ಗ್ರಂಥವನ್ನು ಕುರಿತು ಮಾತನಾಡಿ, ಪ್ರೊ. ಎಸ್. ಶಿವರಾಜಪ್ಪನವರು ರಚಿಸಿರುವ ಗಾಂಧಿ ರಸಪ್ರಶ್ನೆಗಳು ಮತ್ತು ಭಜನ್ಸ್ ಎಂಬ ಗ್ರಂಥವು ಗಾಂಧೀಜಿಯವರನ್ನು ಆಧಾರಿಸಿ 1,200ಕ್ಕೂ ಹೆಚ್ಚು ವಸ್ತು ನಿಷ್ಠ ಆಧಾರಿತ ಪ್ರಶ್ನೆಗಳನ್ನು ಒಳಗೊಂಡಿದ್ದು, ಇದು ಎಲ್ಲ ವರ್ಗದ ಸ್ಪರ್ಧಾತ್ಮಕ ವಿದ್ಯಾರ್ಥಿಗಳಿಗೆ ಹೆಚ್ಚು ಉಪಯುಕ್ತವಾಗಿದ್ದು. ಈ ಪುಸ್ತಕವು ಓದಲು ಸರಳ ಹಾಗೂ ಸುಲಭವಾಗಿದೆ ಎಂದು ಹೇಳಿದರು.

ಶ್ರೀ ನಟರಾಜ ಪ್ರತಿಷ್ಠಾನದ ವಿಶೇಷಾಧಿಕಾರಿ ಪ್ರೊ. ಎಸ್. ಶಿವರಾಜಪ್ಪ ಅವರು ಅಧ್ಯಕ್ಷತೆ ವಹಿಸಿ ಮಾತನಾಡಿ, ಶರಣ ಜ್ಯೋತಿ ಪ್ರಸಾರಾಂಗದ ಮೂಲ ಉದ್ದೇಶವೆಂದರೆ ಶರಣ ಚಿಂತನೆಗಳ ಜೊತೆಗೆ ವಿದ್ಯಾರ್ಥಿಗಳಿಗೆ ಸಹಕಾರಿಯಾಗುವ ಪುಸ್ತಕಗಳನ್ನು ಪ್ರಕಟಿಸುವ ಆಲೋಚನೆ ಇದೆ.

ಸುಮಾರು ವರ್ಷಕ್ಕೆ 25 ರಿಂದ 50 ಸಣ್ಣ ಸಣ್ಣ ಕೃತಿಗಳನ್ನು ಪ್ರಕಟಿಸುವ ಉದ್ದೇಶವಿದೆ. ಇದು ಪ್ರತಿಯೊಬ್ಬರಿಗೂ ತಲುಪಬೇಕೆಂಬುದು ಪ್ರಸಾರಾಂಗದ ಉದ್ದೇಶವಾಗಿದೆ. ಪ್ರಸಾರಾಂಗದ ಯಶಸ್ಸಿಗೆ ಶ್ರೀಗಳ ಪೂರ್ಣ ಸಹಕಾರವಿದೆ ಎಂದು ತಿಳಿಸಿದರು.

ಶ್ರೀ ನಟರಾಜ ಪ್ರತಿಷ್ಠಾನದ ಅಧ್ಯಕ್ಷ ಶ್ರೀ ಚಿದಾನಂದ ಸ್ವಾಮೀಜಿ ಸಾನ್ನಿಧ್ಯ ವಹಿಸಿದ್ದರು

ಕನ್ನಡ ಸಾಹಿತ್ಯ ಕಲಾಕುಟಿದ ಅಧ್ಯಕ್ಷ ಎಂ. ಚಂದ್ರಶೇಖರ್ ಸ್ವಾಗತಿಸಿದರು. ಪ್ರಾಂಶುಪಾಲೆ ವಿ.ಡಿ. ಸುನೀತಾ ರಾಣಿ ವಂದಿಸಿದರು. ಉಪನ್ಯಾಸಕ ಬಿ. ರಾಧ ನಿರೂಪಿಸಿದರು.

### ಗಾಂಧೀಜಿ ತತ್ವ ಅನುಸರಿಸಬೇಕಿದೆ

ಬೆಂಗಳೂರಿನ ಗಾಂಧಿಭವನದ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಅವರು ಗ್ರಂಥವನ್ನು ಬಿಡುಗಡೆ ಮಾಡಿ ಮಾತನಾಡಿ, ಗಾಂಧಿಯ ವಿಚಾರಗಳನ್ನು ಪ್ರಚಾರ ಪಡಿಸುವಂತಹ ಕೆಲಸ ಇದಾಗಿದೆ. ಗಾಂಧೀಯನ್ನು ಅನುಕರಣೆ ಮಾಡುವ ಅಗತ್ಯವಿಲ್ಲ, ಅವರ ತತ್ವಗಳನ್ನು, ವಿಚಾರಗಳನ್ನು ಅನುಸರಿಸಬೇಕಾಗಿದೆ. ರಾಜಕೀಯವನ್ನು ಗಂಭೀರವಾಗಿ ಪರಿಗಣಿಸಬೇಕು. ಒಳ್ಳೆಯ ಜನ ರಾಜಕೀಯಕ್ಕೆ ಬರಬೇಕಾಗಿದೆ. ವೈಯಕ್ತಿಕ ಕೆಲಸಗಳನ್ನು ಮಾಡುವುದರ ಜೊತೆಗೆ ಸಮಾಜಮುಖಿ ಕೆಲಸವನ್ನು ಮಾಡಬೇಕಾಗಿದೆ. ಸರ್ವೋದಯ ಚಿಂತನೆಯನ್ನು ಇಟ್ಟುಕೊಂಡು ರಚನಾತ್ಮಕ ಕೆಲಸಗಳನ್ನು ಮಾಡಿದವರು ಗಾಂಧೀಜಿ ಎಂದು ಹೇಳಿದರು.





ಆಂದೋಲನ

ಶರಣ ಜ್ಯೋತಿ ಪ್ರಸಾರಾಂಗ ಉದ್ಘಾಟನೆ; ಡಾ.ಎಸ್.ಶಿವರಾಜಪ್ಪ ವಿರಚಿತ 'ಗಾಂಧಿ ರಸಪ್ರಶ್ನೆಗಳು', 'ಭಜನ್ಸ್' ಗ್ರಂಥ ಲೋಕಾರ್ಪಣೆ

# ಶಿಕ್ಷಣ ಸಂಸ್ಥೆಗಳಲ್ಲಿ ರಾಜಕೀಯ ಚಿಂತನೆಗೆ ಆದ್ಯತೆ ನೀಡಬೇಕು: ಎಚ್‌ವಿ

ಮೈಸೂರು: ವಿದ್ಯಾರ್ಥಿಗಳಲ್ಲಿ ನಾಯಕತ್ವದ ಗುಣ ಬರಬೇಕೆಂದರೆ ಶಿಕ್ಷಣ ಸಂಸ್ಥೆಗಳಲ್ಲಿ ರಾಜಕೀಯ ಚಿಂತನೆ ಮತ್ತು ವ್ಯವಸ್ಥಿತ ರಾಜಕೀಯ ಚಟುವಟಿಕೆಗಳಿಗೆ ಆದ್ಯತೆ ನೀಡಬೇಕು ಎಂದು ವಿಧಾನಪರಿಷತ್ ಸದಸ್ಯ ಅಡಗೂರು ಎಚ್. ವಿಶ್ವನಾಥ್ ಹೇಳಿದರು.

ಶ್ರೀ ನಟರಾಜ ಪ್ರತಿಷ್ಠಾನ, ನಟರಾಜ ಶಿಕ್ಷಣ ಸಂಸ್ಥೆಗಳ ಸಹಯೋಗದಲ್ಲಿ ಭಾನುವಾರ ಹೊಸ ಮಠದ ನಟರಾಜ ಸಭಾಂಗಣದಲ್ಲಿ ಆಯೋಜಿಸಿದ್ದ ಶರಣ ಜ್ಯೋತಿ ಪ್ರಸಾರಾಂಗ ಉದ್ಘಾಟನೆ ಮತ್ತು ಡಾ.ಎಸ್. ಶಿವರಾಜಪ್ಪ ವಿರಚಿತ 'ಗಾಂಧಿ ರಸಪ್ರಶ್ನೆಗಳು' ಮತ್ತು 'ಭಜನ್ಸ್' ಗ್ರಂಥ ಲೋಕಾರ್ಪಣಾ ಸಮಾರಂಭದಲ್ಲಿ ಪ್ರಸಾರಾಂಗವನ್ನು ಉದ್ಘಾಟಿಸಿ ಮಾತನಾಡಿದ ಅವರು, ವಿಶ್ವವಿದ್ಯಾನಿಲಯದಲ್ಲಿ ಪ್ರಸಾರಾಂಗವಿರುವ ಅದೇ ಮಾದರಿಯಲ್ಲಿ ಶಿಕ್ಷಣ ಸಂಸ್ಥೆಯೊಂದು ಪ್ರಸಾರಾಂಗ ಮಾಡಲು ಹೊರಟಿರುವುದು ಒಳ್ಳೆಯ ಬೆಳವಣಿಗೆ ಮತ್ತು ದೂರದೃಷ್ಟಿಯ ಯೋಜನೆ ಎಂದರು.



ಮೈಸೂರಿನ ಶ್ರೀ ನಟರಾಜ ಸಭಾಂಗಣದಲ್ಲಿ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಡಾ.ಎಸ್.ಶಿವರಾಜಪ್ಪ ವಿರಚಿತ 'ಗಾಂಧಿ ರಸಪ್ರಶ್ನೆಗಳು' ಮತ್ತು 'ಭಜನ್ಸ್' ಗ್ರಂಥವನ್ನು ಬಿಡುಗಡೆ ಮಾಡಲಾಯಿತು. ಎಚ್.ವಿಶ್ವನಾಥ್, ಶ್ರೀ ಚಿದಾನಂದ ಸ್ವಾಮೀಜಿ, ಎಲ್.ಶಿವಲಿಂಗಪ್ಪ, ಡಾ.ಎಸ್. ಶಿವರಾಜಪ್ಪ, ಎಂ.ಚಂದ್ರಶೇಖರ್ ಮತ್ತಿತರರು ಚಿತ್ರದಲ್ಲಿದ್ದಾರೆ.

> ನಾನು ಜೆಎಸ್‌ಎಸ್‌ನಲ್ಲಿ ಓದುವಾಗಲೇ ನನ್ನಲ್ಲಿ ನಾಯಕತ್ವ ಗುಣಗಳು ಬೆಳೆದವು. ಆದರೆ, ಇತ್ತೀಚಿನ ದಿನಗಳಲ್ಲಿ ಶಿಕ್ಷಣ ಸಂಸ್ಥೆಗಳು ರಾಜಕೀಯವನ್ನು ಮೈಲಿಗೆ ಎಂದೇ ಭಾವಿಸಿವೆ. ಹಾಗಾಗಿ, ವಿದ್ಯಾರ್ಥಿಗಳಲ್ಲಿ ನಾಯಕತ್ವದ ಕೊರತೆ ಕಂಡು ಬರುತ್ತಿದೆ. ಬಹುತೇಕ ವಿದ್ಯಾರ್ಥಿಗಳಿಗೆ ನಾವು ಪ್ರಜಾಪ್ರಭುತ್ವದಲ್ಲಿ ಇದ್ದೇವೆ ಎಂಬುದೇ ಗೊತ್ತಿಲ್ಲ. ಭಾರತ ಮಾತಾಕೀ ಜೈ ಎನ್ನುವುದೇ ದೇಶಪ್ರೇಮ ಎಂದುಕೊಂಡಿದ್ದಾರೆ. ವಾಸ್ತವದ ಅರಿವಿಲ್ಲ.
>
> ■ ಎಚ್.ವಿಶ್ವನಾಥ್, ವಿಧಾನಪರಿಷತ್ ಸದಸ್ಯರು

ವಿಧಾನಪರಿಷತ್ ಸದಸ್ಯ ಸಿ.ಎನ್.ಮಂಜೇಗೌಡ ಮಾತನಾಡಿ, ನೋಟಿನ ಮೇಲೆ ಮತ್ತು ಸರ್ಕಾರಿ ಕಚೇರಿಗಳಲ್ಲಿ ಗಾಂಧೀಜಿ ಭಾವಚಿತ್ರ ಹಾಕುವುದನ್ನು ಸರ್ಕಾರ ಕಡ್ಡಾಯ ಮಾಡದೇ ಇದ್ದರೆ, ಗಾಂಧಿಯನ್ನು ಎಲ್ಲರೂ ಮರೆತೇ ಬಿಡುತ್ತಿದ್ದರು. ಇಂತಹ ಮಹಾತ್ಮನ ಕುರಿತು ಕೃತಿಗಳನ್ನು ಬರೆದು ಮುಂದಿನ ಪೀಳಿಗೆಗೆ ಅವರ ಆದರ್ಶವನ್ನು ತಿಳಿಸುತ್ತಿರುವುದು ಒಳ್ಳೆಯದು ಎಂದರು.

ಗಾಂಧಿ ಅವರ ಸಿದ್ಧಾಂತ, ನಡೆದು ಬಂದ ದಾರಿ ನಮಗೆಲ್ಲ ಮಾರ್ಗದರ್ಶನವಾಗಬೇಕು. ವಿದ್ಯಾರ್ಥಿಗಳು ಪುಸ್ತಕಗಳನ್ನು ಹೆಚ್ಚು ಓದಬೇಕು. ಸಮಾಜಕ್ಕೆ ಕಳಂಕವಾಗುವ ಕೆಲಸವನ್ನು ಯಾರೂ ಮಾಡಬಾರದು ಎಂದರು.

ಡಾ.ಎಸ್.ಶಿವರಾಜಪ್ಪ ವಿರಚಿತ 'ಗಾಂಧಿ ರಸಪ್ರಶ್ನೆಗಳು' ಮತ್ತು 'ಭಜನ್ಸ್' ಗ್ರಂಥಕ್ಕೆ ಪ್ರೋತ್ಸಾಹಧನವಾಗಿ ವಿಧಾನಪರಿಷತ್ ಸದಸ್ಯರ ನಿಧಿಯಿಂದ ಅನುದಾನ ಕೊಡಲು ಸಾಧ್ಯವಿದ್ದರೆ 2 ಲಕ್ಷ ರೂ. ನೀಡುವೆ. ಇಲ್ಲವಾದರೆ ವೈಯಕ್ತಿಕವಾಗಿ 1 ಲಕ್ಷ ರೂ. ನೀಡುವೆ ಎಂದು ಭರವಸೆ ನೀಡಿದರು.

ಪುಸ್ತಕ ಬಿಡುಗಡೆಗೊಳಿಸಿ ಮಾತನಾಡಿದ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ, ರಾಜಕೀಯ ಅಪವಿತ್ರ ಕ್ಷೇತ್ರವಲ್ಲ. ರಾಜಕೀಯವನ್ನು ಗಂಭೀರವಾಗಿ ಪರಿಗಣಿಸಿ, ಒಳ್ಳೆಯ ಜನರು ರಾಜಕೀಯಕ್ಕೆ ಬರುವ ಮೂಲಕ ಶುದ್ಧೀಕರಣ ಮಾಡಬೇಕು ಎಂದರು. ಶ್ರೀ ನಟರಾಜ ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಚಿದಾನಂದ ಸ್ವಾಮೀಜಿ, ಚಿತ್ರಕಲಾವಿದ ಎಲ್.ಶಿವಲಿಂಗಪ್ಪ, ಪ್ರತಿಷ್ಠಾನದ ಆಡಳಿತಾಧಿಕಾರಿ ಡಾ.ಎಸ್.ಶಿವರಾಜಪ್ಪ, ಕನ್ನಡ ಸಾಹಿತ್ಯ ಕಲಾಕೂಟದ ಅಧ್ಯಕ್ಷ ಎಂ.ಚಂದ್ರಶೇಖರ್ ಹಾಜರಿದ್ದರು.

ಕರುನಾಡ ಕಣ್ವ / Karunada Kanva 21–12–2022

# ಚಿತ್ರ ಸಹಿತ ಸುದ್ದಿಗಳು



ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ರಿ ವತಿಯಿಂದ ಬೆಂಗಳೂರಿನ ಶೇಷಾದ್ರಿಪುರಂನ ಕಾಲೇಜಿನ ಸಭಾಂಗಣದಲ್ಲಿ ಏರ್ಪಡಿಸಿದ್ದ ಹಿರಿಯ ಸಾಹಿತಿ, ಸಂಸ್ಕೃತಿ ಪರಿಚಾರಕ ಕೆ.ಎಂ.ರೇವಣ್ಣ ಅವರಿಗೆ 76 ರ ಅಭಿನಂದನೆ, ಅವರ"ಯಶಸ್ಸಿನ ಸೂತ್ರಗಳು" ಕೃತಿ ಲೋಕಾರ್ಪಣೆ ಸಮಾರಂಭದಲ್ಲಿ ಕೆ.ಎಂ.ರೇವಣ್ಣ ಶ್ರೀಮತಿ ಮಂಗಳ ದಂಪತಿಗಳನ್ನು, ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ.ವೂಡೇ ಪಿ.ಕೃಷ್ಣ, ರಮಣಮಹರ್ಷಿ ಸಮೂಹ ಸಂಸ್ಥೆಗಳ ಮುಖ್ಯಸ್ಥರಾದ ನಾಡೋಜ ಎಸ್.ಷಡಕ್ಷರಿ, ಕಾರ್ಯಕ್ರಮ ಆಯೋಜಕರಾದ ಸಂಸ್ಥೆಯ ಡಾ. ಸಿಸಿರಾ ಅವರುಗಳು ಅಭಿನಂದಿಸಿ ಗೌರವಿಸಿದರು.

NO. KA/SK/KLR-901/2020-2022 Dated at Kolar-563101, the 29-11-2019.

'ಮಾಯಾಲೋಕ'ದ 'ಮೊದಲ ಮಿತ್ರ'ರ

# ದುನಿಯಾ ಪತ್ರಿಕೆ



DATE : 24-11-2022

ಕೋಲಾರ, ಚಿಕ್ಕಬಳ್ಳಾಪುರ, ಬೆಂಗಳೂರು ಜಿಲ್ಲೆಗಳಿಂದ

DUNIYA PATHRIKE

Kannada Daily

ಕನ್ನಡ ದಿನಪತ್ರಿಕೆ

ಎನ್. ಮುನಿಯಪ್ಪ
ಸಂಪಾದಕ

Email: duniyapathrike@gmail.com

ಕೆ.ಆರ್.ರಾಘವೇಂದ್ರ
ಸಹ ಸಂಪಾದಕ

ಸಿ.ನಾರಾಯಣಸ್ವಾಮಿ
ಉಪ ಸಂಪಾದಕ

## ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಗೆ ಎನ್ ಎಸ್ ಎಸ್ ಸಹಕಾರಿ ; ಕೆ.ಶಿವರಾಜ್



ವಿಜಯಪುರ : ದೇವನಹಳ್ಳಿ ತಾಲೂಕಿನ ಅವತಿ ಗ್ರಾಮ ಪಂಚಾಯಿತಿಯ ಗೊಬ್ಬರಗುಂಟೆ ಗ್ರಾಮದಲ್ಲಿ ಬೆಂಗಳೂರಿನ ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕದ ವತಿಯಿಂದ ಅಮೃತ ಸಮುದಾಯ ಅಭಿವೃದ್ಧಿ ಯೋಜನೆ ಅಡಿಯಲ್ಲಿ ದತ್ತು ಗ್ರಾಮದಲ್ಲಿ ಏಳು ದಿನಗಳ ಎನ್‌ಎಸ್‌ಎಸ್ ವಿಶೇಷ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ದೇವನಹಳ್ಳಿ ತಾಲೂಕು ದಂಡಾಧಿಕಾರಿ ಕೆ. ಶಿವರಾಜ್ ರವರು ಎನ್‌ಎಸ್‌ಎಸ್ ನ ಮುಖಾಂತರ ಗ್ರಾಮಗಳ ಸರ್ವತೋಮುಖ ಅಭಿವೃದ್ಧಿ ಮಾಡಲು ಸಾಧ್ಯವಾಗುತ್ತದೆ. ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕ ಈ ಹಾದಿಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತದೆ ಎಂದರು ಮತ್ತು ನಾನು ಕಂಡಂತೆ ಗೊಬ್ಬರಗುಂಟೆ ಗ್ರಾಮವನ್ನು ಮುಂದಿನ ಐದು ವರ್ಷಗಳಿಗೆ ದತ್ತಾಗಿ ಪಡೆದು ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ ಎಂದು ಕಾಲೇಜಿನ ಎನ್‌ಎಸ್‌ಎಸ್ ಘಟಕದ ಕುರಿತು ಮೆಚ್ಚುಗೆ ವ್ಯಕ್ತಪಡಿಸಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ. ಕೃಷ್ಣರವರು ಗ್ರಾಮದಲ್ಲಿ ಕಳೆದ ಎರಡು ವರ್ಷಗಳಿಂದ ಗ್ರಾಮವನ್ನು ದತ್ತು ಪಡೆದು ಅನೇಕ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಹಮ್ಮಿಕೊಂಡಿರುವುದು ಅಭಿನಂದನಾರ್ಹ ವಿಚಾರ ಎಂದು ಸಂತಸ ವ್ಯಕ್ತಪಡಿಸಿದ್ದರು. ಎನ್ ಎಸ್ ಎಸ್ ಸ್ವಯಂಸೇವಕರು ಸೇವೆಗಿಂತ ಹೆಚ್ಚಾಗಿ ಉತ್ತಮ ವಿಚಾರಗಳನ್ನು ಕಲಿಯಲು ಎನ್‌ಎಸ್‌ಎಸ್ ಸಹಕಾರಿ ಆಗುತ್ತದೆ, ಕಾಲೇಜಿನ ಎನ್‌ಎಸ್‌ಎಸ್ ಘಟಕವೂ ಕಳೆದ ಶಿಬಿರದಲ್ಲಿ ಗ್ರಾಮದ ಸರ್ಕಾರಿ ಶಾಲಾ ಆವರಣದಲ್ಲಿ ಶೌಚಾಲಯಗಳನ್ನು ನಿರ್ಮಿಸಿಕೊಟ್ಟು ಮಾದರಿಯಾಗಿದೆ ಎಂದು ಸಂತಸ ವ್ಯಕ್ತಪಡಿಸಿದರು. ಇನ್ನು ಶಿಬಿರದಲ್ಲಿ ನೂರರಷ್ಟು ಆಯುಷ್ಮಾನ್ ಭಾರತ್ ಕಾರ್ಡ್ ವಿತರಣೆ ಕಾರ್ಯಕ್ರಮ, ಹುಲಿಕಲ್ ನಟರಾಜ್ ರವರಿಂದ ಪವಾಡ ಬಂಯಲು ಕಾರ್ಯಕ್ರಮ, ಸರ್ಕಾರಿ ಶಾಲೆ ಹಾಗೂ ಅಂಗನವಾಡಿ ಕಟ್ಟಡಕ್ಕೆ ಬಣ್ಣ ಬಳಿಯುವ ಕಾರ್ಯಕ್ರಮ, ಪ್ಲಾಸ್ಟಿಕ್ ಮುಕ್ತ ಗ್ರಾಮ ರಕ್ತದಾನ ಶಿಬಿರ, ಹೀಗೆ ಹಲವಾರು ವಿಭಿನ್ನ ಕಾರ್ಯಕ್ರಮಗಳನ್ನ ಹಮ್ಮಿಕೊಳ್ಳಲಾಗಿದೆ ಎಂದು ಎನ್ ಎಸ್ ಎಸ್ ಅಧಿಕಾರಿ ನವೀನ್ ಕುಮಾರ್ ಅವರು ತಿಳಿಸಿದರು. ಕಾರ್ಯಕ್ರಮದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಗ್ರಾಮ ಒನ್ ಜಿಲ್ಲಾ ನಿರ್ದೇಶಕ ದಿವಾಕರ್ ರೆಡ್ಡಿ, ಪಂಚಾಯತಿ ಸದಸ್ಯರಾದ ಶೋಭ ಬಸವರಾಜ್, ವಿಶ್ವನಾಥ್, ಕಂದಾಯ ನಿರೀಕ್ಷಕ ಉಪೇಂದ್ರ, ಗ್ರಾಮಸ್ಥರು, ಮುಖಂಡರು ಮತ್ತು ಎನ್‌ಎಸ್‌ಎಸ್ ಸ್ವಯಂ ಸೇವಕರು ಹಾಜರಿದ್ದರು.

ವಿಮರ್ಶಾವಾಣಿ
ಕನ್ನಡ ದಿನಪತ್ರಿಕೆ
VIMARSHAAVANI Kannada Daily
DATE : 24-11-2022 THURSDAY

# ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಗೆ ಎನ್ ಎಸ್ ಎಸ್ ಸಹಕಾರಿ ; ಕೆ.ಶಿವರಾಜ್



ವಿಜಯಪುರ : ದೇವನಹಳ್ಳಿ ತಾಲೂಕಿನ ಅವತಿ ಗ್ರಾಮ ಪಂಚಾಯಿತಿ ಯ ಗೊಬ್ಬರಗುಂಟೆ ಗ್ರಾಮದಲ್ಲಿ ಬೆಂಗಳೂರಿನ ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕದ ವತಿಯಿಂದ ಅಮೃತ ಸಮುದಾಯ ಅಭಿವೃದ್ಧಿ ಯೋಜನೆ ಅಡಿಯಲ್ಲಿ ಹತ್ತು ಗ್ರಾಮದಲ್ಲಿ ಏಳು ದಿನಗಳ ಎನ್ ಎಸ್ ಎಸ್ ವಿಶೇಷ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ದೇವನಹಳ್ಳಿ ತಾಲೂಕು ದಂಡಾಧಿಕಾರಿ ಕೆ. ಶಿವರಾಜ್ ರವರು ಎನ್‌ಎಸ್‌ಎಸ್ ನ ಮುಖಾಂತರ ಗ್ರಾಮಗಳ ಸರ್ವತೋಮುಖ ಅಭಿವೃದ್ಧಿ ಮಾಡಲು ಸಾಧ್ಯವಾಗುತ್ತದೆ, ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕ ಈ ಹಾದಿಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತದೆ ಎಂದರು ಮತ್ತು ನಾನು ಕಂಡಂತೆ ಗೊಬ್ಬರಗುಂಟೆ ಗ್ರಾಮವನ್ನು ಮುಂದಿನ ಐದು ವರ್ಷಗಳಿಗೆ ದತ್ತಾಗಿ ಪಡೆದು ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ ಎಂದು ಕಾಲೇಜಿನ ಎನ್‌ಎಸ್‌ಎಸ್ ಘಟಕದ ಕುರಿತು ಮೆಚ್ಚುಗೆ ವ್ಯಕ್ತಪಡಿಸಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ. ಕೃಷ್ಣರವರು ಗ್ರಾಮದಲ್ಲಿ ಕಳೆದ ಎರಡು ವರ್ಷಗಳಿಂದ ಗ್ರಾಮವನ್ನು ದತ್ತು ಪಡೆದು ಅನೇಕ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಹಮ್ಮಿಕೊಂಡಿರುವುದು ಅಭಿನಂದನಾರ್ಹ ವಿಚಾರ ಎಂದು ಸಂತಸ ವ್ಯಕ್ತಪಡಿಸಿದ್ದರು, ಎನ್ ಎಸ್ ಎಸ್ ಸ್ವಯಂಸೇವಕರು ಸೇವೆಗಿಂತ ಹೆಚ್ಚಾಗಿ ಉತ್ತಮ ವಿಚಾರಗಳನ್ನು ಕಲಿಯಲು ಎನ್‌ಎಸ್‌ಎಸ್ ಸಹಕಾರಿ ಆಗುತ್ತದೆ, ಕಾಲೇಜಿನ ಎನ್‌ಎಸ್‌ಎಸ್ ಘಟಕವೂ ಕಳೆದ ಶಿಬಿರದಲ್ಲಿ ಗ್ರಾಮದ ಸರ್ಕಾರಿ ಶಾಲಾ ಆವರಣದಲ್ಲಿ ಶೌಚಾಲಯಗಳನ್ನು ನಿರ್ಮಿಸಿಕೊಟ್ಟು ಮಾದರಿಯಾಗಿದೆ ಎಂದು ಸಂತಸ ವ್ಯಕ್ತಪಡಿಸಿದರು. ಇನ್ನು ಶಿಬಿರದಲ್ಲಿ ನೂರರಷ್ಟು ಆಯುಷ್ಮಾನ್ ಭಾರತ್ ಕಾರ್ಡ್ ವಿತರಣೆ ಕಾರ್ಯಕ್ರಮ, ಹುಲಿಕಲ್ ನಟರಾಜ್ ರವರಿಂದ ಪವಾಡ ಬಯಲು ಕಾರ್ಯಕ್ರಮ, ಸರ್ಕಾರಿ ಶಾಲೆ ಹಾಗೂ ಅಂಗನವಾಡಿ ಕಟ್ಟಡಕ್ಕೆ ಬಣ್ಣ ಬಳಿಯುವ ಕಾರ್ಯಕ್ರಮ, ಪ್ಲಾಸ್ಟಿಕ್ ಮುಕ್ತ ಗ್ರಾಮ ರಕ್ತದಾನ ಶಿಬಿರ, ಹೀಗೆ ಹಲವಾರು ವಿಭಿನ್ನ ಕಾರ್ಯಕ್ರಮಗಳನ್ನ ಹಮ್ಮಿಕೊಳ್ಳಲಾಗಿದೆ ಎಂದು ಎನ್ ಎಸ್ ಎಸ್ ಅಧಿಕಾರಿ ನವೀನ್ ಕುಮಾರ್ ಅವರು ತಿಳಿಸಿದರು. ಕಾರ್ಯಕ್ರಮದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಗ್ರಾಮ ಒನ್ ಜಿಲ್ಲಾ ನಿರ್ದೇಶಕ ದಿವಾಕರ್ ರೆಡ್ಡಿ, ಪಂಚಾಯತಿ ಸದಸ್ಯರಾದ ಶೋಭ ಬಸವರಾಜ್, ವಿಶ್ವನಾಥ್, ಕಂದಾಯ ನಿರೀಕ್ಷಕ ಉಪೇಂದ್ರ, ಗ್ರಾಮಸ್ಥರು, ಮುಖಂಡರು ಮತ್ತು ಎನ್‌ಎಸ್‌ಎಸ್ ಸ್ವಯಂ ಸೇವಕರು ಹಾಜರಿದ್ದರು.

ಕೋಲಾರ ಸೊಬಗು
email : kolarasobagu@gmail.com
ಗುರುವಾರ 24-11-2022
KOLARA SOBAGU Kannada Daily

# ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಗೆ ಎನ್ ಎಸ್ ಎಸ್ ಸಹಕಾರಿ ; ಕೆ.ಶಿವರಾಜ್



ವಿಜಯಪುರ : ದೇವನಹಳ್ಳಿ ತಾಲೂಕಿನ ಅವತಿ ಗ್ರಾಮ ಪಂಚಾಯಿತಿಯ ಗೊಬ್ಬರಗುಂಟೆ ಗ್ರಾಮದಲ್ಲಿ ಬೆಂಗಳೂರಿನ ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕದ ವತಿಯಿಂದ ಅಮೃತ ಸಮುದಾಯ ಅಭಿವೃದ್ಧಿ ಯೋಜನೆ ಅಡಿಯಲ್ಲಿ ದತ್ತು ಗ್ರಾಮದಲ್ಲಿ ಏಳು ದಿನಗಳ ಎನ್ ಎಸ್ ಎಸ್ ವಿಶೇಷ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ದೇವನಹಳ್ಳಿ ತಾಲೂಕು ದಂಡಾಧಿಕಾರಿ ಕೆ. ಶಿವರಾಜ್ ರವರು ಎನ್ ಎಸ್ ಎಸ್ ನ ಮುಖಾಂತರ ಗ್ರಾಮಗಳ ಸರ್ವತೋಮುಖ ಅಭಿವೃದ್ಧಿ ಮಾಡಲು ಸಾಧ್ಯವಾಗುತ್ತದೆ, ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕ ಈ ಹಾದಿಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತದೆ ಎಂದರು ಮತ್ತು ನಾನು ಕಂಡಂತೆ ಗೊಬ್ಬರಗುಂಟೆ ಗ್ರಾಮವನ್ನು ಮುಂದಿನ ಐದು ವರ್ಷಗಳಿಗೆ ದತ್ತಾಗಿ ಪಡೆದು ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ ಎಂದು ಕಾಲೇಜಿನ ಎನ್ಎಸ್ಎಸ್ ಘಟಕದ ಕುರಿತು ಮೆಚ್ಚುಗೆ ವ್ಯಕ್ತಪಡಿಸಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ. ಕೃಷ್ಣರವರು ಗ್ರಾಮದಲ್ಲಿ ಕಳೆದ ಎರಡು ವರ್ಷಗಳಿಂದ ಗ್ರಾಮವನ್ನು ದತ್ತು ಪಡೆದು ಅನೇಕ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಹಮ್ಮಿಕೊಂಡಿರುವುದು ಅಭಿನಂದನಾರ್ಹ ವಿಚಾರ ಎಂದು ಸಂತಸ ವ್ಯಕ್ತಪಡಿಸಿದ್ದರು, ಎನ್ ಎಸ್ ಎಸ್ ಸ್ವಯಂಸೇವಕರು ಸೇವೆಗಿಂತ ಹೆಚ್ಚಾಗಿ ಉತ್ತಮ ವಿಚಾರಗಳನ್ನು ಕಲಿಯಲು ಎನ್ಎಸ್ಎಸ್ ಸಹಕಾರಿ ಆಗುತ್ತದೆ. ಕಾಲೇಜಿನ ಎನ್ಎಸ್ಎಸ್ ಘಟಕವೂ ಕಳೆದ ಶಿಬಿರದಲ್ಲಿ ಗ್ರಾಮದ ಸರ್ಕಾರಿ ಶಾಲಾ ಆವರಣದಲ್ಲಿ ಶೌಚಾಲಯಗಳನ್ನು ನಿರ್ಮಿಸಿಕೊಟ್ಟು ಮಾದರಿಯಾಗಿದೆ ಎಂದು ಸಂತಸ ವ್ಯಕ್ತಪಡಿಸಿದರು. ಇನ್ನು ಶಿಬಿರದಲ್ಲಿ ನೂರರಷ್ಟು ಆಯುಷ್ಮಾನ್ ಭಾರತ್ ಕಾರ್ಡ್ ವಿತರಣೆ ಕಾರ್ಯಕ್ರಮ, ಹುಲಿಕಲ್ ನಟರಾಜ್ ರವರಿಂದ ಪವಾಡ ಬಯಲು ಕಾರ್ಯಕ್ರಮ, ಸರ್ಕಾರಿ ಶಾಲೆ ಹಾಗೂ ಅಂಗನವಾಡಿ ಕಟ್ಟಡಕ್ಕೆ ಬಣ್ಣ ಬಳಿಯುವ ಕಾರ್ಯಕ್ರಮ, ಪ್ಲಾಸ್ಟಿಕ್ ಮುಕ್ತ ಗ್ರಾಮ ರಕ್ತದಾನ ಶಿಬಿರ, ಹೀಗೆ ಹಲವಾರು ವಿಭಿನ್ನ ಕಾರ್ಯಕ್ರಮಗಳನ್ನ ಹಮ್ಮಿಕೊಳ್ಳಲಾಗಿದೆ ಎಂದು ಎನ್ ಎಸ್ ಎಸ್ ಅಧಿಕಾರಿ ನವೀನ್ ಕುಮಾರ್ ಅವರು ತಿಳಿಸಿದರು. ಕಾರ್ಯಕ್ರಮದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಗ್ರಾಮ ಒನ್ ಜಿಲ್ಲಾ ನಿರ್ದೇಶಕ ದಿವಾಕರ್ ರೆಡ್ಡಿ, ಪಂಚಾಯತಿ ಸದಸ್ಯರಾದ ಶೋಭ ಬಸವರಾಜ್, ವಿಶ್ವನಾಥ್, ಕಂದಾಯ ನಿರೀಕ್ಷಕ ಉಪೇಂದ್ರ, ಗ್ರಾಮಸ್ಥರು, ಮುಖಂಡರು ಮತ್ತು ಎನ್ಎಸ್ಎಸ್ ಸ್ವಯಂ ಸೇವಕರು ಹಾಜರಿದರು.

ಕೋಲಾರ ಧ್ವನಿ

24-11-2022 ಗುರುವಾರ

ಪುಲಿಕೇಶಿ ಬಳಗದ ಕನ್ನಡ ದಿನಪತ್ರಿಕೆ

# ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಗೆ ಎನ್ ಎಸ್ ಎಸ್ ಸಹಕಾರಿ ; ಕೆ.ಶಿವರಾಜ್



ವಿಜಯಪುರ : ದೇವನಹಳ್ಳಿ ತಾಲೂಕಿನ ತವತಿ ಗ್ರಾಮ ಪಂಚಾಯಿತಿ ಉಪ ಗೊಬ್ಬರಗುಂಟೆ ಗ್ರಾಮದಲ್ಲಿ ಬೆಂಗಳೂರಿನ ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕದ ವತಿಯಿಂದ ಅಮೃತ ಸಮುದಾಯ ಅಭಿವೃದ್ಧಿ ಯೋಜನೆ ಅಡಿಯಲ್ಲಿ ಮತ್ತು ಗ್ರಾಮದಲ್ಲಿ ಏಳು ದಿನಗಳ ಎನ್ ಎಸ್ ಎಸ್ ವಿಶೇಷ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ದೇವನಹಳ್ಳಿ ತಾಲೂಕು ದಂಡಾಧಿಕಾರಿ ಕೆ. ಶಿವರಾಜ್ ರವರು ಎನ್ಎಸ್ಎಸ್ ನ ಮುಖಾಂತರ ಗ್ರಾಮಗಳ ಸರ್ವತೋಮುಖ ಅಭಿವೃದ್ಧಿ ಮಾಡಲು ಸಾಧ್ಯವಾಗುತ್ತದೆ, ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕ ಈ ಹಾದಿಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತದೆ ಎಂದರು ಮತ್ತು ನಾನು ಕಂಡಂತೆ ಗೊಬ್ಬರಗುಂಟೆ ಗ್ರಾಮವನ್ನು ಮುಂದಿನ ಐದು ವರ್ಷಗಳಿಗೆ ದತ್ತಾಗಿ ಪಡೆದು ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ ಎಂದು ಕಾಲೇಜಿನ ಎನ್ಎಸ್ಎಸ್ ಘಟಕದ ಕುರಿತು ಮೆಚ್ಚುಗೆ ವ್ಯಕ್ತಪಡಿಸಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ. ಕೃಷ್ಣರವರು ಗ್ರಾಮದಲ್ಲಿ ಕಳೆದ ಎರಡು ವರ್ಷಗಳಿಂದ ಗ್ರಾಮವನ್ನು ದತ್ತು ಪಡೆದು ಅನೇಕ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಹಮ್ಮಿಕೊಂಡಿರುವುದು ಅಭಿನಂದನಾರ್ಹ ವಿಚಾರ ಎಂದು ಸಂತಸ ವ್ಯಕ್ತಪಡಿಸಿದ್ದರು, ಎನ್ ಎಸ್ ಎಸ್ ಸ್ವಯಂ ಸೇವಕರು ಸೇವೆಗಿಂತ ಹೆಚ್ಚಾಗಿ ಉತ್ತಮ ವಿಚಾರಗಳನ್ನು ಕಲಿಯಲು ಎನ್ಎಸ್ಎಸ್ ಸಹಕಾರಿ ಆಗುತ್ತದೆ, ಕಾಲೇಜಿನ ಎನ್ಎಸ್ಎಸ್ ಘಟಕವೂ ಕಳೆದ ಶಿಬಿರದಲ್ಲಿ ಗ್ರಾಮದ ಸರ್ಕಾರಿ ಶಾಲಾ ಆವರಣದಲ್ಲಿ ಶೌಚಾಲಯ ಗಳನ್ನು ನಿರ್ಮಿಸಿಕೊಟ್ಟು ಮಾದರಿ ಯಾಗಿದೆ ಎಂದು ಸಂತಸ ವ್ಯಕ್ತಪಡಿಸಿದರು. ಇನ್ನು ಶಿಬಿರದಲ್ಲಿ ನೂರರಷ್ಟು ಆಯುಷ್ಮಾನ್ ಭಾರತ್ ಕಾರ್ಡ್ ವಿತರಣೆ ಕಾರ್ಯಕ್ರಮ, ಹುಲಿಕಲ್ ನಟರಾಜ್ ರವರಿಂದ ಪವಾಡ ಬಯಲು ಕಾರ್ಯಕ್ರಮ, ಸರ್ಕಾರಿ ಶಾಲೆ ಹಾಗೂ ಅಂಗನವಾಡಿ ಕಟ್ಟಡಕ್ಕೆ ಬಣ್ಣ ಬಳಿಯುವ ಕಾರ್ಯಕ್ರಮ, ಪ್ಲಾಸ್ಟಿಕ್ ಮುಕ್ತ ಗ್ರಾಮ ರಕ್ತದಾನ ಶಿಬಿರ, ಹೀಗೆ ಹಲವಾರು ವಿಭಿನ್ನ ಕಾರ್ಯಕ್ರಮಗಳನ್ನ ಹಮ್ಮಿ ಕೊಳ್ಳಲಾಗಿದೆ ಎಂದು ಎನ್ ಎಸ್ ಎಸ್ ಅಧಿಕಾರಿ ನವೀನ್ ಕುಮಾರ್ ಅವರು ತಿಳಿಸಿದರು. ಕಾರ್ಯಕ್ರಮದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಗ್ರಾಮ ಒನ್ ಜಿಲ್ಲಾ ನಿರ್ದೇಶಕ ದಿವಾಕರ್ ರೆಡ್ಡಿ, ಪಂಚಾಯತಿ ಸದಸ್ಯರಾದ ಶೋಭ ಬಸವರಾಜ್, ವಿಶ್ವನಾಥ್, ಕಂದಾಯ ನಿರೀಕ್ಷಕ ಉಪೇಂದ್ರ, ಗ್ರಾಮಸ್ತರು, ಮುಖಂಡರು ಮತ್ತು ಎನ್ಎಸ್ಎಸ್ ಸ್ವಯಂ ಸೇವಕರು ಹಾಜರಿದ್ದರು.

ಸರ್ವ ಕರ್ನಾಟಕ

SARVA KARNATAKA

# ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಗೆ ಎನ್ ಎಸ್ ಎಸ್ ಸಹಕಾರಿ- ದೇವನಹಳ್ಳಿ ತಾಲ್ಲೂಕು ದಂಡಾಧಿಕಾರಿ ಕೆ. ಶಿವರಾಜ್ ಅಭಿಮತ



ದೇವನಹಳ್ಳಿ/ ವಿಜಯಪುರ- ದೇವನಹಳ್ಳಿ ತಾಲೂಕಿನ ಅವತಿ ಗ್ರಾಮ ಪಂಚಾಯಿತಿಯ ಗೊಬ್ಬರಗುಂಟೆ ಗ್ರಾಮದಲ್ಲಿ ಬೆಂಗಳೂರಿನ ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕದ ವತಿಯಿಂದ ಅಮೃತ ಸಮುದಾಯ ಅಭಿವೃದ್ಧಿ ಯೋಜನೆ ಅಡಿಯಲ್ಲಿ ದತ್ತು ಗ್ರಾಮದಲ್ಲಿ ಏಳು ದಿನಗಳ ಎನ್‌ಎಸ್‌ಎಸ್ ವಿಶೇಷ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ದೇವನಹಳ್ಳಿ ತಾಲೂಕು ದಂಡಾಧಿಕಾರಿ ಕೆ. ಶಿವರಾಜ್ ರವರು ಎನ್‌ಎಸ್‌ಎಸ್ ನ ಮುಖಾಂತರ ಗ್ರಾಮಗಳ ಸರ್ವತೋಮುಖ ಅಭಿವೃದ್ಧಿ ಮಾಡಲು ಸಾಧ್ಯವಾಗುತ್ತದೆ. ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕ ಈ ಹಾದಿಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತದೆ ಎಂದರು ಮತ್ತು ನಾನು ಕಂಡಂತೆ ಗೊಬ್ಬರಗುಂಟೆ ಗ್ರಾಮವನ್ನು ಮುಂದಿನ ಐದು ವರ್ಷಗಳಿಗೆ ದತ್ತಾಗಿ ಪಡೆದು ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ ಎಂದು ಕಾಲೇಜಿನ ಎನ್‌ಎಸ್‌ಎಸ್ ಘಟಕದ ಕುರಿತು ಮೆಚ್ಚುಗೆ ವ್ಯಕ್ತಪಡಿಸಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ. ಕೃಷ್ಣರವರು ಗ್ರಾಮದಲ್ಲಿ ಕಳೆದ ಎರಡು ವರ್ಷಗಳಿಂದ ಗ್ರಾಮವನ್ನು ದತ್ತು ಪಡೆದು ಅನೇಕ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಹಮ್ಮಿಕೊಂಡಿರುವುದು ಅಭಿನಂದನಾರ್ಹ ವಿಚಾರ ಎಂದು ಸಂತಸ ವ್ಯಕ್ತಪಡಿಸಿದ್ದರು. ಎನ್ ಎಸ್ ಎಸ್ ಸ್ವಯಂಸೇವಕರು ಸೇವೆಗಿಂತ ಹೆಚ್ಚಾಗಿ ಉತ್ತಮ ವಿಚಾರಗಳನ್ನು ಕಲಿಯಲು ಎನ್‌ಎಸ್‌ಎಸ್ ಸಹಕಾರಿ ಆಗುತ್ತದೆ, ಕಾಲೇಜಿನ ಎನ್‌ಎಸ್‌ಎಸ್ ಘಟಕವು ಕಳೆದ ಶಿಬಿರದಲ್ಲಿ ಗ್ರಾಮದ ಸರ್ಕಾರಿ ಶಾಲಾ ಆವರಣದಲ್ಲಿ ಶೌಚಾಲಯಗಳನ್ನು ನಿರ್ಮಿಸಿಕೊಟ್ಟು ಮಾದರಿಯಾಗಿದೆ ಎಂದು ಸಂತಸ ವ್ಯಕ್ತಪಡಿಸಿದರು.

ಇನ್ನು ಶಿಬಿರದಲ್ಲಿ ನೂರರಷ್ಟು ಆಯುಷ್ಮಾನ್ ಭಾರತ್ ಕಾರ್ಡ್ ವಿತರಣೆ ಕಾರ್ಯಕ್ರಮ. ಹುಲಿಕಲ್ ನಟರಾಜ್ ರವರಿಂದ ಪವಾಡ ಬಯಲು ಕಾರ್ಯಕ್ರಮ, ಸರ್ಕಾರಿ ಶಾಲೆ ಹಾಗೂ ಅಂಗನವಾಡಿ ಕಟ್ಟಡಕ್ಕೆ ಬಣ್ಣ ಬಳಿಯುವ ಕಾರ್ಯಕ್ರಮ. ಪ್ಲಾಸ್ಟಿಕ್ ಮುಕ್ತ ಗ್ರಾಮ ರಕ್ತದಾನ ಶಿಬಿರ. ಹೀಗೆ ಹಲವಾರು ವಿಭಿನ್ನ ಕಾರ್ಯಕ್ರಮಗಳನ್ನ ಹಮ್ಮಿಕೊಳ್ಳಲಾಗಿದೆ ಎಂದು ಎನ್ ಎಸ್ ಎಸ್ ಅಧಿಕಾರಿ ನವೀನ್ ಕುಮಾರ್ ಅವರು ತಿಳಿಸಿದರು.

ಕಾರ್ಯಕ್ರಮದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಗ್ರಾಮ ಒನ್ ಜಿಲ್ಲಾ ನಿರ್ದೇಶಕ ದಿವಾಕರ್ ರೆಡ್ಡಿ, ಪಂಚಾಯತಿ ಸದಸ್ಯರಾದ ಶೋಭ ಬಸವರಾಜ್. ವಿಶ್ವನಾಥ್. ಕಂದಾಯ ನಿರೀಕ್ಷಕ ಉಪೇಂದ್ರ, ಗ್ರಾಮಸ್ಥರು. ಮುಖಂಡರು ಮತ್ತು ಎನ್‌ಎಸ್‌ಎಸ್ ಸ್ವಯಂ ಸೇವಕರು ಹಾಜರಿದ್ದರು

ಕೋಲಾರ ಅಗ್ನಿ

24-11-2022

# ಗ್ರಾಮಗಳ ಅಭಿವೃದ್ಧಿಗೆ ಎನ್‌ಎಸ್‌ಎಸ್ ಸಹಕಾರಿ



ಕೋಲಾರ ಅಗ್ನಿ

ದೇವನಹಳ್ಳಿ/ ವಿಜಯಪುರ : ದೇವನಹಳ್ಳಿ ತಾಲೂಕಿನ ಅವತಿ ಗ್ರಾಮ ಪಂಚಾಯಿತಿಯ ಗೊಬ್ಬರಗುಂಟೆ ಗ್ರಾಮದಲ್ಲಿ ಬೆಂಗಳೂರಿನ ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕದ ವತಿಯಿಂದ ಅಮೃತ ಸಮುದಾಯ ಅಭಿವೃದ್ಧಿ ಯೋಜನೆ ಅಡಿಯಲ್ಲಿ ದತ್ತು ಗ್ರಾಮದಲ್ಲಿ ಏಳು ದಿನಗಳ ಎನ್‌ಎಸ್ ಎಸ್ ವಿಶೇಷ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ದೇವನಹಳ್ಳಿ ತಾಲೂಕು ದಂಡಾಧಿಕಾರಿ ಕೆ. ಶಿವರಾಜ್ ರವರು ಎನ್‌ಎಸ್‌ಎಸ್ ನ ಮುಖಾಂತರ ಗ್ರಾಮಗಳ ಸರ್ವತೋಮುಖ ಅಭಿವೃದ್ಧಿ ಮಾಡಲು ಸಾಧ್ಯವಾಗುತ್ತದೆ. ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕ ಈ ಹಾದಿಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತದೆ ಎಂದರು ಮತ್ತು ನಾನು ಕಂಡಂತೆ ಗೊಬ್ಬರಗುಂಟೆ ಗ್ರಾಮವನ್ನು ಮುಂದಿನ ಐದು ವರ್ಷಗಳಿಗೆ ದತ್ತಾಗಿ ಪಡೆದು ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ ಎಂದು ಕಾಲೇಜಿನ ಎನ್‌ಎಸ್‌ಎಸ್ ಘಟಕದ ಕುರಿತು ಮೆಚ್ಚುಗೆ ವ್ಯಕ್ತಪಡಿಸಿದ್ದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ. ಕೃಷ್ಣರವರು ಗ್ರಾಮದಲ್ಲಿ ಕಳೆದ ಎರಡು ವರ್ಷಗಳಿಂದ ಗ್ರಾಮವನ್ನು ದತ್ತು ಪಡೆದು ಅನೇಕ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಹಮ್ಮಿಕೊಂಡಿರುವುದು ಅಭಿನಂದನಾರ್ಹ ವಿಚಾರ ಎಂದು ಸಂತಸ ವ್ಯಕ್ತಪಡಿಸಿದ್ದರು. ಎನ್ ಎಸ್ ಎಸ್ ಸ್ವಯಂಸೇವಕರು ಸೇವೆಗಿಂತ ಹೆಚ್ಚಾಗಿ ಉತ್ತಮ ವಿಚಾರಗಳನ್ನು ಕಲಿಯಲು ಎನ್‌ಎಸ್‌ಎಸ್ ಸಹಕಾರಿ ಆಗುತ್ತದೆ. ಕಾಲೇಜಿನ ಎನ್‌ಎಸ್‌ಎಸ್ ಘಟಕವೂ ಕಳೆದ ಶಿಬಿರದಲ್ಲಿ ಗ್ರಾಮದ ಸರ್ಕಾರಿ ಶಾಲಾ ಆವರಣದಲ್ಲಿ ಶೌಚಾಲಯ ಗಳನ್ನು ನಿರ್ಮಿಸಿಕೊಟ್ಟು ಮಾದರಿಯಾಗಿದೆ ಎಂದು ಸಂತಸ ವ್ಯಕ್ತಪಡಿಸಿದರು.

ಇನ್ನು ಶಿಬಿರದಲ್ಲಿ ನೂರರಷ್ಟು ಆಯುಷ್ಮಾನ್ ಭಾರತ್ ಕಾರ್ಡ್ ವಿತರಣೆ ಕಾರ್ಯಕ್ರಮ, ಹುಲಿಕಲ್ ನಟರಾಜ್ ರವರಿಂದ ಪವಾಡ ಬಯಲು ಕಾರ್ಯಕ್ರಮ, ಸರ್ಕಾರಿ ಶಾಲೆ ಹಾಗೂ ಅಂಗನವಾಡಿ ಕಟ್ಟಡಕ್ಕೆ ಬಣ್ಣ ಬಳಿಯುವ ಕಾರ್ಯಕ್ರಮ, ಪ್ಲಾಸ್ಟಿಕ್ ಮುಕ್ತ ಗ್ರಾಮ ರಕ್ತದಾನ ಶಿಬಿರ, ಹೀಗೆ ಹಲವಾರು ವಿಭಿನ್ನ ಕಾರ್ಯಕ್ರಮಗಳನ್ನ ಹಮ್ಮಿಕೊಳ್ಳಲಾಗಿದೆ ಎಂದು ಎನ್ ಎಸ್ ಎಸ್ ಅಧಿಕಾರಿ ನವೀನ್ ಕುಮಾರ್ ಅವರು ತಿಳಿಸಿದರು.

ಕಾರ್ಯಕ್ರಮದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಗ್ರಾಮ ಒನ್ ಜಿಲ್ಲಾ ನಿರ್ದೇಶಕ ದಿವಾಕರ್ ರೆಡ್ಡಿ, ಪಂಚಾಯಿತಿ ಸದಸ್ಯರಾದ ಶೋಭ ಬಸವರಾಜ್, ವಿಶ್ವನಾಥ್, ಕಂದಾಯ ನಿರೀಕ್ಷಕ ಉಪೇಂದ್ರ, ಗ್ರಾಮಸ್ಥರು, ಮುಖಂಡರು ಮತ್ತು ಎನ್‌ಎಸ್‌ಎಸ್ ಸ್ವಯಂ ಸೇವಕರು ಹಾಜರಿದ್ದರು.

ಕೋಲಾರ ಜಿಲ್ಲೆಯಿಂದ ಪ್ರಕಟಿತ

email:chumbakavani@gmail.com

PRN: KA/SK/KLR-902/2020-22

SRINIVASAPURA P/O-563135

# ಚುಂಬಕ ವಾಣಿ



CHUMBAKA VANI

kannada Daily

Date: 24-11-2022

ಕನ್ನಡ ದಿನ ಪತ್ರಿಕೆ

## ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಗೆ ಎನ್ ಎಸ್ ಎಸ್ ಸಹಕಾರಿ ; ಕೆ.ಶಿವರಾಜ್



ವಿಜಯಪುರ : ದೇವನಹಳ್ಳಿ ತಾಲೂಕಿನ ಅವತಿ ಗ್ರಾಮ ಪಂಚಾಯಿತಿಯ ಗೊಬ್ಬರಗುಂಟೆ ಗ್ರಾಮದಲ್ಲಿ ಬೆಂಗಳೂರಿನ ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕದ ವತಿಯಿಂದ ಅವ್ಯುತ ಸಮುದಾಯ ಅಭಿವೃದ್ಧಿ ಯೋಜನೆ ಅಡಿಯಲ್ಲಿ ದತ್ತು ಗ್ರಾಮದಲ್ಲಿ ಏಳು ದಿನಗಳ ಎನ್ ಎಸ್ ಎಸ್ ವಿಶೇಷ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ದೇವನಹಳ್ಳಿ ತಾಲೂಕು ದಂಡಾಧಿಕಾರಿ ಕೆ. ಶಿವರಾಜ್ ರವರು ಎನ್ ಎಸ್ ಎಸ್ ನ ಮುಖಾಂತರ ಗ್ರಾಮಗಳ ಸರ್ವತೋಮುಖ ಅಭಿವೃದ್ಧಿ ಮಾಡಲು ಸಾಧ್ಯವಾಗುತ್ತದೆ. ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕ ಈ ಹಾದಿಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತದೆ ಎಂದರು ಮತ್ತು ನಾನು ಕಂಡಂತೆ ಗೊಬ್ಬರಗುಂಟೆ ಗ್ರಾಮವನ್ನು ಮುಂದಿನ ಐದು ವರ್ಷಗಳಿಗೆ ದತ್ತಾಗಿ ಪಡೆದು ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ ಎಂದು ಕಾಲೇಜಿನ ಎನ್ ಎಸ್ ಎಸ್ ಘಟಕದ ಕುರಿತು ಮೆಚ್ಚುಗೆ ವ್ಯಕ್ತಪಡಿಸಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ. ಕೃಷ್ಣರವರು ಗ್ರಾಮದಲ್ಲಿ ಕಳೆದ ಎರಡು ವರ್ಷಗಳಿಂದ ಗ್ರಾಮವನ್ನು ದತ್ತು ಪಡೆದು ಅನೇಕ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಹಮ್ಮಿಕೊಂಡಿರುವುದು ಅಭಿನಂದನಾರ್ಹ ವಿಚಾರ ಎಂದು ಸಂತಸ ವ್ಯಕ್ತಪಡಿಸಿದ್ದರು. ಎನ್ ಎಸ್ ಎಸ್ ಸ್ವಯಂಸೇವಕರು ಸೇವೆಗಿಂತ ಹೆಚ್ಚಾಗಿ ಉತ್ತಮ ವಿಚಾರಗಳನ್ನು ಕಲಿಯಲು ಎನ್ ಎಸ್ ಎಸ್ ಸಹಕಾರಿ ಆಗುತ್ತದೆ. ಕಾಲೇಜಿನ ಎನ್ ಎಸ್ ಎಸ್ ಘಟಕವೂ ಕಳೆದ ಶಿಬಿರದಲ್ಲಿ ಗ್ರಾಮದ ಸರ್ಕಾರಿ ಶಾಲಾ ಆವರಣದಲ್ಲಿ ಶೌಚಾಲಯಗಳನ್ನು ನಿರ್ಮಿಸಿಕೊಟ್ಟು ಮಾದರಿಯಾಗಿದೆ ಎಂದು ಸಂತಸ ವ್ಯಕ್ತಪಡಿಸಿದರು. ಇನ್ನು ಶಿಬಿರದಲ್ಲಿ ನೂರರಷ್ಟು ಆಯುಷ್ಮಾನ್ ಭಾರತ್ ಕಾರ್ಡ್ ವಿತರಣೆ ಕಾರ್ಯಕ್ರಮ, ಹುಲಿಕಲ್ ನಟರಾಜ್ ರವರಿಂದ ಪವಾಡ ಬಯಲು ಕಾರ್ಯಕ್ರಮ, ಸರ್ಕಾರಿ ಶಾಲೆ ಹಾಗೂ ಅಂಗನವಾಡಿ ಕಟ್ಟಡಕ್ಕೆ ಬಣ್ಣ ಬಳಿಯುವ ಕಾರ್ಯಕ್ರಮ, ಪ್ಲಾಸ್ಟಿಕ್ ಮುಕ್ತ ಗ್ರಾಮ ರಕ್ತದಾನ ಶಿಬಿರ, ಹೀಗೆ ಹಲವಾರು ವಿಭಿನ್ನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ ಎಂದು ಎನ್ ಎಸ್ ಎಸ್ ಅಧಿಕಾರಿ ನವೀನ್ ಕುಮಾರ್ ಅವರು ತಿಳಿಸಿದರು. ಕಾರ್ಯಕ್ರಮದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಗ್ರಾಮ ಒನ್ ಜಿಲ್ಲಾ ನಿರ್ದೇಶಕ ದಿವಾಕರ್ ರೆಡ್ಡಿ, ಪಂಚಾಯತಿ ಸದಸ್ಯರಾದ ಶೋಭ ಬಸವರಾಜ್, ವಿಶ್ವನಾಥ್, ಕಂದಾಯ ನಿರೀಕ್ಷಕ ಉಪೇಂದ್ರ, ಗ್ರಾಮಸ್ಥರು, ಮುಖಂಡರು ಮತ್ತು ಎನ್ ಎಸ್ ಎಸ್ ಸ್ವಯಂ ಸೇವಕರು ಹಾಜರಿದ್ದರು.



ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ನಾಡೋಜ ಡಾ. ವೂಡೇ ಪಿ. ಕೃಷ್ಣ ಅವರು ಹೆಚ್.ಎ.ಎಲ್.ನ ಏರೋ ಇಂಜಿನ್ ವಿಭಾಗದ ಕರ್ನಾಟಕ ಕಲಾ ಸಂಘದ ಅಧ್ಯಕ್ಷರು, ಕನ್ನಡಪರ ಚಿಂತಕರಾದ ಟಿ.ಎನ್. ಸಾಯಿಕುಮಾರ್ ಅವರಿಗೆ ಕರ್ನಾಟಕ ಮದರ್ ತೆರೇಸಾ (ಡಾ. ಎಸ್.ಜಿ. ಸುಶೀಲಮ್ಮ) ದತ್ತಿ ಪ್ರಶಸ್ತಿ ಪ್ರದಾನ ಮಾಡಿ ಅಭಿನಂದಿಸಿದರು. ಸಂಸ್ಥೆಯ ಅಧ್ಯಕ್ಷರಾದ ಡಾ. ಎಸ್. ರಾಮಲಿಂಗೇಶ್ವರ (ಸಿಸಿರಾ) ಇದ್ದಾರೆ.

ಉದಯವಾಣಿ ಬುಧವಾರ, ನವೆಂಬರ್ 23, 2022



ಗಾಂಧಿಭವನದಲ್ಲಿ ಮಂಗಳವಾರ ನಡೆದ್ದ ರಾಷ್ಟ್ರೀಯ ಸೇವಾ ಯೋಜನೆಯ ವಿಶೇಷ ಶಿಬಿರವನ್ನು ಸಿಂಧಿ ಕಾಲೇಜಿನ ನಿರ್ದೇಶಕ ಡಾ।ಬಿ.ಎಸ್.ಶ್ರೀಕಂಠ ಉದ್ಘಾಟಿಸಿದರು. ಗಾಂಧಿಭವನದ ಅಧ್ಯಕ್ಷ ವೂಡೇ ಪಿ.ಕೃಷ್ಣ ಇತರರಿದ್ದರು.

ಪ್ರಜಾ  ಪ್ರಗತಿ

# ಕ್ರಿಯಾಶಕ್ತಿಯನ್ನು ಪ್ರಯೋಗಕ್ಕೆ ಒಳಪಡಿಸಿದ ಆದರ್ಶ ವ್ಯಕ್ತಿ ಗಾಂಧಿ

■ ಪ್ರಜಾಪ್ರಗತಿ.ಕಾಂ

ಬೆಂಗಳೂರು : ಗಾಂಧೀಜಿಯವರು ಕ್ರಿಯಾಶಕ್ತಿಯ ಮೌಲ್ಯವನ್ನು ಪ್ರಯೋಗಕ್ಕೆ ಒಳಪಡಿಸಿದ ಆದರ್ಶವ್ಯಕ್ತಿಯಾಗಿದ್ದಾರೆ ಎಂದು ನಾಡೋಜ ಡಾ.ವೂಡೇ ಪಿ ಕೃಷ್ಣ ಅಭಿಪ್ರಾಯಪಟ್ಟರು.

ಅವರು ನ.21 ರಂದು ಗಾಂಧೀಶಾಂತಿ ಪ್ರತಿಷ್ಠಾನವು, ಕರ್ನಾಟಕಗಾಂಧೀ ಸ್ಮಾರಕ ನಿಧಿ ಹಾಗೂ ಶೇಷಾದ್ರಿಪುರಂಸಂಜೆ ಕಾಲೇಜಿನ ಗಾಂಧೀ ಅಧ್ಯಯನಕೇಂದ್ರ ಮತ್ತು ಶೇಷಾದ್ರಿಪುರಂ ಸಂಜೆಕಾಲೇಜಿನ ಹಳೆಯ ವಿದ್ಯಾರ್ಥಿಗಳ ಸಂಘ ಸಮರ್ಪಣ ಇವರ ಸಹಯೋಗದಲ್ಲಿ ಆಯೋಜಿಸಲಾಗಿದ್ದ ಸಾಹಿತ್ಯರತ್ನ ಶ್ರೀ ಅನ್ನದಾನಯ್ಯ ಪುರಾಣಿಕ ವಿಶೇಷ ದತ್ತಿ ಉಪನ್ಯಾಸದ ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ, ಗಾಂಧೀಜಿ ಬಿಟ್ಟು ಭಾರತವಿಲ್ಲ, ಭಾರತವನ್ನು ಬಿಟ್ಟು ಗಾಂಧೀಜಿಯವರಿಲ್ಲ ಎಂಬಂತೆ ಬದುಕಿದ



ಮಹಾತ್ಮ ಗಾಂಧಿಯವರು ಸಮಗ್ರರಾಷ್ಟ್ರೀಯ ಪರಿಕಲ್ಪನೆಯನ್ನು ಕಟ್ಟಿಕೊಟ್ಟವರು ಜಗತ್ತಿನಲ್ಲೇ ಬೃಹತ್ ಪ್ರಜಾಪ್ರಭುತ್ವ ದೇಶಕ್ಕೆ ಬುನಾದಿ ಹಾಕಿದವರಲ್ಲಿಗಾಂಧೀಜಿಯವರ ಪಾತ್ರ ಪ್ರಮುಖವಾದದ್ದು. ಅವರ ಗಾಂಧೀಜಿಯವರ ಆದರ್ಶದ ಮಾರ್ಗದಲ್ಲಿ ನಡೆದ ಶ್ರೀ ಅನ್ನದಾನಯ್ಯ ಪುರಾಣಿಕರು ದೇಶಕ್ಕೆತಮ್ಮ ನಿಸ್ವಾರ್ಥ ಸೇವೆಯನ್ನು ಸಲ್ಲಿಸಿದ್ದಾರೆ. ಅಂತಹವರ ಸ್ಮರಣೆ ಮಾಡುವುದು ಇಂದಿನ ಯುವಜನಾಂಗಕ್ಕೆ ಮಾದರಿಎಂದರು.

ಗಾಂಧೀಜಿಯವರ ಸಮನ್ವಯದೃಷ್ಟಿ ಎಂಬ ವಿಷಯವನ್ನುಕುರಿತು ಪ್ರೊ. ಡಿಆಂಜನಪ್ಪ ಬಳ್ಳಕೆರೆ ಅವರು ವಿಶೇಷ ಉಪನ್ಯಾಸವನ್ನು ನೀಡಿದರು. ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಜೇರಿಗೆ ಲೋಕೇಶ್ ಆಶಿಯನುಡಿಗಳನ್ನಾಡಿದರು, ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿಗಳಾದ ಪ್ರೊ.ಮಲ್ಲೇಪುರಂ ಜಿ ವೆಂಕಟೇಶ ಅವರು ಮಾತನಾಡಿ ಅನ್ನದಾನಯ್ಯನವರ ಬದುಕಿನ ಸೇವೆಗೆ ಪ್ರೇರಣೆಯಾದ ಗಾಂಧೀಜಿಯವರ ಆದರ್ಶಗುಣಗಳನ್ನು ಯುವಕರು ಮೈಗೂಡಿಸಿಕೊಳ್ಳಬೇಕು ಎಂದು ನುಡಿದರು. ದತ್ತಿಯ ದಾನಿಗಳು ಶ್ರೀ ಅನ್ನದಾನಯ್ಯ ಪುರಾಣಿಕರ ಮಗಳಾದ ಪ್ರೊ:ಚಂದ್ರಿಕಾ ಪುರಾಣಿಕ್ಅವರು ಮಾತನಾಡಿ ಅವರ ತಂದೆಯವರ ನಡೆ-ನುಡಿ ಸಾಮಾಜಿಕ ಕಾರ್ಯದಲ್ಲಿದ್ದ ಸೇವಾಮನೋಭಾವಕ್ಕೆಗಾಂಧೀಜಿಯವರ ಆದರ್ಶ ನಡೆ ಕಾರಣವೆಂದರು. ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಸಂಜೆಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಎಸ್.ಎಸ್.ಸತೀಶ್, ಸಮರ್ಪಣಸಂಘದ ಕಾರ್ಯದರ್ಶಿಗಳಾದ ಗಿರೀಶ್ಎಚ್.ಎಸ್. ಹಾಗೂ ಗಾಂಧೀ ಶಾಂತಿಪ್ರತಿಷ್ಠಾನದಗೌರವ ಕಾರ್ಯದರ್ಶಿಗಳಾದ ಡಾ.ಸತ್ಯಮಂಗಲ ಮಹಾದೇವ ಹಾಗೂ ಶ್ರೀ ಅನ್ನದಾನಯ್ಯ ಪುರಾಣಿಕರ ಕುಟುಂಬ ವರ್ಗ, ಹಿತೈಷಿ ಬಂಧುಗಳು ಹಾಜರಿದ್ದರು. ವಿದ್ಯಾರ್ಥಿಗಳು ಸಂಪನ್ಮೂಲ ವ್ಯಕ್ತಿಗಳೊಂದಿಗೆ ಗಾಂಧೀಜಿಯವರ ಸಮನ್ವಯದೃಷ್ಟಿಯಕುರಿತುಸಂವಾದ ನಡೆಸಿದ್ದು ಕಾರ್ಯಕ್ರಮಕ್ಕೆ ವಿಶೇಷ ಮೆರುಗುತಂದಿತ್ತು.

ಉದಯವಾಣಿ ಸೋಮವಾರ, ನವೆಂಬರ್ 21, 2022

# ಎಡ-ಬಲ ಬದಿಗೊತ್ತಿ ಒಂದಾಗಿ

- ಒಗ್ಗಟಿನ ಮಂತ್ರ ಪಠಿಸಲು ಚನ್ನಮಲ್ಲ ಸ್ವಾಮೀಜಿ ಸಂಘ-ಸಂಸ್ಥೆಗಳಿಗೆ ಸಲಹೆ

ಬೆಂಗಳೂರು: 'ಎಡ-ಬಲ ಬದಿಗೊತ್ತಿ ಎಲ್ಲರೂ ಒಂದಾದಾಗ ಮಾತ್ರ ದಲಿತ ಸಮುದಾಯಗಳ ಸಮಗ್ರ ಅಭಿವೃದ್ಧಿ ಸಾಧ್ಯ' ಎಂದು ನಿಡುಮಾಮಿಡಿ ಮಠದ ವೀರಭದ್ರ ಚನ್ನಮಲ್ಲ ಸ್ವಾಮೀಜಿ ತಿಳಿಸಿದ್ದರು.

ನಗರದ ಗಾಂಧಿ ಭವನದಲ್ಲಿ ಭಾನುವಾರ ಏರ್ಪಡಿಸಿದ್ದ ರಂಗಸ್ವಾಮಿ ಅವರ 'ಜಾಂಬವ ಜಗತ್ತಿನ ಚಿಗುರು' ಮತ್ತು ಎಂ. ಗಂಗಾಧರ್ ಅವರ 'ಆದಿ ಜಾಂಬವರ ಕಥೆ-ವ್ಯಥೆ' ಕೃತಿ ಲೋಕಾರ್ಪಣೆ. ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ದಲಿತ ಸಮುದಾಯಗಳಲ್ಲಿ ಒಗ್ಗಟ್ಟಿನ ಕೊರತೆ ಕಾಡುತ್ತಿದೆ. ಇದು ಅವರ ಬೆಳವಣಿಗೆಗೆ ತಡೆಯೊಡ್ಡುತ್ತಿದೆ. ಎಡ ಮತ್ತು ಬಲ ಎಂಬ ಲೆಕ್ಕಾಚಾರ ಬದಿಗೊತ್ತಿ ಸಮುದಾಯ ಒಟ್ಟಾಗಿ ಸಾಗಬೇಕು. ಈ ನಿಟ್ಟಿನಲ್ಲಿ ಸಂಘ-ಸಂಸ್ಥೆಗಳು ಕಾರ್ಯೋನ್ಮುಖವಾಗಬೇಕು' ಎಂದು ಹೇಳಿದರು.

ಕೆಪಿಎಸ್‌ಸಿ ಮಾಜಿ ಅಧ್ಯಕ್ಷ ಗೋನಾಳ ಭೀಮಪ್ಪ ಮಾತನಾಡಿ, ದಲಿತ ಸಮುದಾಯದವರು ಒಗ್ಗಟ್ಟು ಪ್ರದರ್ಶಿಸಿ ಒಳ ಮೀಸಲಾತಿಗೆ ಸಂಬಂಧಿಸಿದಂತೆ ನ್ಯಾ.ಸದಾಶಿವ ಆಯೋಗ ನೀಡಿರುವ ವರದಿಯ ಜಾರಿಗೆ ಒತ್ತಾಯಿಸಬೇಕು ಎಂದರು.

ಜಮ್ಮು ಮತ್ತು ಕಾಶ್ಮೀರದ ನಿವೃತ್ತ ಮುಖ್ಯ ನ್ಯಾಯಾಧೀಶ ಎಂ. ರಾಮಕೃಷ್ಣ ಮಾತನಾಡಿದರು. ರಂಗಸ್ವಾಮಿ ವಿರಚಿತ 'ಜಾಂಬವ ಜಗತ್ತಿನ ಚಿಗುರು' ಕೃತಿಯನ್ನು ನ್ಯಾ.ಬಿ. ವೀರಪ್ಪ ಮತ್ತು ಎಂ.ಗಂಗಾಧರ್ ರಚನೆಯ 'ಆದಿ ಜಾಂಬವ ಕಥೆ-ವ್ಯಥೆ' ಕೃತಿಯನ್ನು ನ್ಯಾ.ಆರ್.ದೇವದಾಸ್ ಲೋಕಾರ್ಪಣೆಗೊಳಿಸಿದರು.

ಗಾಂಧಿ ಸ್ಮಾರಕ ಭವನದ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಕರ್ನಾಟಕ ಗ್ರಾಪಂ ಸೀಮಾ ನಿರ್ಣಯ ಆಯೋಗದ ಅಧ್ಯಕ್ಷ ಎಂ. ಲಕ್ಷ್ಮೀನಾರಾಯಣ, ಸ್ತ್ರೀಶಕ್ತಿ ಸಂಘಟನೆಗಳ ಹೋರಾಟಗಾರ್ತಿ ಮಂಜುಳಾ ರಂಗಸ್ವಾಮಿ ಹಾಜರಿದ್ದರು.



'ಜಾಂಬವ ಜಗತ್ತಿನ ಚಿಗುರು' ಮತ್ತು 'ಆದಿ ಜಾಂಬವರ ಕಥೆ-ವ್ಯಥೆ' ಕೃತಿಯನ್ನು ನಿಡುಮಾಮಿಡಿ ಮಠದ ವೀರಭದ್ರ ಚನ್ನಮಲ್ಲ ಸ್ವಾಮೀಜಿ ಬಿಡುಗಡೆ ಮಾಡಿದರು.

ಪ್ರಜಾ ಪ್ರಗತಿ

Nov 21, 2022

# ಉನ್ನತ ವಿಚಾರಗಳಿಂದ ಬದುಕು ಸಾರ್ಥಕ

## ಅಂತಾರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ನಾಡೋಜ ಡಾ.ವೂಡೇ ಪಿ ಕೃಷ್ಣ ಅಭಿಪ್ರಾಯ



■ ಪ್ರಜಾಪ್ರಗತಿ.ಕಾಂ

ಬೆಂಗಳೂರು : ಉನ್ನತ ವಿಚಾರಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಬದುಕಿದಾಗ ಮಾತ್ರ ಜೀವನ ಸಾರ್ಥಕತೆ ಪಡೆದುಕೊಳ್ಳುತ್ತದೆ ಎಂದು ಶಿಕ್ಷಣತಜ್ಞ ನಾಡೋಜ ಡಾ.ವೂಡೇ ಪಿ ಕೃಷ್ಣ ಅಭಿಪ್ರಾಯಪಟ್ಟರು.

ಶೇಷಾದ್ರಿಪುರಂ ಸಂಜೆ ಕಾಲೇಜು ಬಸವ ಅಧ್ಯಯನ ಕೇಂದ್ರವು, ಬಸವ ಸಮಿತಿ ಹಾಗೂ ಬಸವಾ ಸೆಂಟರ್ ಆಫ್ ನಾರ್ಥ್ ಅಮೇರಿಕ ಇವರ ಸಹಯೋಗದಲ್ಲಿ ಶನಿವಾರದಂದು ಶೇಷಾದ್ರಿಪುರಂ ಶಿಕ್ಷಣದತ್ತಿಯ ಆನ್ಲೈನ್ ಜೂಮ್ ವೇದಿಕೆಯಲ್ಲಿ ಆಯೋಜಿಸಲಾಗಿದ್ದ ಶರಣ ತತ್ತ್ವದ ಪ್ರಸ್ತುತತೆ ಎಂಬ ಅಂತಾರಾಷ್ಟ್ರೀಯ ವಿಚಾರ ಸಂಕಿರಣವನ್ನು ಉದ್ದೇಶಿಸಿ ಮಾತನಾಡಿದರು.

ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಆರ್.ಸಿ ಹಿರೇಮಠ ಕನ್ನಡ ಅಧ್ಯಯನ ಕೇಂದ್ರದ ವಿಶ್ರಾಂತ ಪ್ರಾಧ್ಯಾಪಕರು ಹಾಗೂ ಹಿರಿಯ ವಿದ್ವಾಂಸರಾದ ಡಾ.ವೀರಣ್ಣ ರಾಜೂರ ರವರು ಪ್ರಸ್ತುತ ಸಾಮಾಜಿಕ ಸಮಸ್ಯೆಗಳಿಗೆ ಬಸವಣ್ಣ ರೂಪಿಸಿದ ಶರಣ ಚಿಂತನೆ ಔಷದಿಯಾಗಿದೆ ಎಂದರು.

ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಮತ್ತೋರ್ವ ಸಂಪನ್ಮೂಲ ವ್ಯಕ್ತಿಗಳಾದ ಬಸವಾ ಸೆಂಟರ್ ಆಫ್ ನಾರ್ತ್ ಅಮೇರಿಕ ಸಂಸ್ಥೆಯ ಅಧ್ಯಕ್ಷರಾದ ಶ್ರೀಶೈಲ ಹಾದಿಮನಿ ಅವರು ಮಾತನಾಡಿ ಬಸವಣ್ಣನವರ ವಿಚಾರಗಳು ಹೆಚ್ಚು ಪ್ರಸ್ತುತವಾಗಬೇಕಿದೆ ಸಾಮಾಜಿಕ ಮೌಲ್ಯಗಳ ಪುನರುತ್ಥಾನ ಶರಣ ತತ್ವಗಳಿಂದ ಮಾತ್ರ ಸಾಧ್ಯ ಎಂದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದ ಬಸವ ಸಮಿತಿಯ ಅಧ್ಯಕ್ಷರಾದ ಶ್ರೀ ಅರವಿಂದ ಜತ್ತಿ ಅವರು ವಿಶ್ವದೆಲ್ಲೆಡೆ ಮಾನವತೆ ಮಾಯವಾಗಿ ಯುದ್ಧಭೀತಿ ತಲೆ ದೋರುತ್ತಿದೆ ಇಂತಹ ಸಂದರ್ಭಗಳಲ್ಲಿ ಶರಣರ ಚಿಂತನೆಗಳು ವಿಶ್ವಶಾಂತಿಗೆ ಅಗತ್ಯವಾದವುಗಳಾಗಿವೆ ಎಂದು ಅಭಿಪ್ರಾಯ ಪಟ್ಟರು.

ಈ ಸಂದರ್ಭದಲ್ಲಿ ಬೇಲಿ ಮಠದ ಮಠಾಧೀಶರಾದ ಶ್ರೀ ಶ್ರೀ ಶ್ರೀ.ನಿ.ಪ್ರ.ಸ್ವರೂಪ ಶಿವರುದ್ರ ಮಹಾಸ್ವಾಮಿಗಳು ಆಶೀರ್ವಚನ ನೀಡಿದರು ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಸಂಜೆ ಕಾಲೇಜಿನ ಆಡಳಿತ ಸಲಹಾ ಮಂಡಳಿ ಸದಸ್ಯರಾದ ಹಿ.ಸಿ.ನಾರಾಯಣ, ಶೇಷಾದ್ರಿಪುರಂ ಸಂಜೆ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಎಸ್.ಎಸ್.ಸತೀಶ್ ಹಾಗೂ ಬಸವ ಸಮಿತಿ ಕಾರ್ಯದರ್ಶಿಗಳಾದ ಗಿರೀಶ್ ಎಸ್. ದಿಬ್ಬೂರ್, ಐಕ್ಯೂಎಸಿ ಸಂಯೋಜಕರಾದ ನಾಗಸುಧಾ ಆರ್, ಬಸವ. ಅಧ್ಯಯನ ಕೇಂದ್ರದ ಸಂಚಾಲಕರಾದ ಸಂತೋಷ್ ಜೆ.ವಿ ಸೇರಿದಂತೆ ಕಾಲೇಜಿನ ಎಲ್ಲಾ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ಹಾಗೂ ರಾಜ್ಯ, ರಾಷ್ಟ್ರ ವಿದೇಶಗಳಿಂದ ಎಲ್ಲಾ ಬಸವ ಅನುಯಾಯಿಗಳು ಭಾಗವಹಿಸಿದ್ದರು.



ಶೇಷಾದ್ರಿಪುರಂ ಶಿಕ್ಷಣದತ್ತಿಯ 20 ಬಸವ ಅಧ್ಯಯನ ಕೇಂದ್ರಗಳಲ್ಲಿ ಬಸವ ಸಮಿತಿಯೊಂದಿಗೆ ಒಡಂಬಡಿಕೆ ಮಾಡಿಕೊಂಡ ಮೊದಲ ಕಾಲೇಜು ಇದಾಗಿದೆ. ಶೇಷಾದ್ರಿಪುರಂ ಸಂಜೆ ಕಾಲೇಜು ಈಗಾಗಲೇ 98 ಅಂತಾರಾಷ್ಟ್ರೀಯ ವಿಚಾರ ಸಂಕಿರಣಗಳನ್ನು ಆಯೋಜಿಸಿದ್ದು ಸಧ್ಯದಲ್ಲೇ ನೂರಕ್ಕೆ ತಲುಪಿ ವಿಶ್ವದಾಖಲೆಯತ್ತ ಸಾಗುತ್ತಿದೆ.

■ ನಾಡೋಜ ಡಾ.ವೂಡೇ ಪಿ ಕೃಷ್ಣ, ಶಿಕ್ಷಣತಜ್ಞ

# ಕನ್ನಡ ಅರವಿಂದ, ಚಿರಂಜೀವಿ ಪ್ರಶಸ್ತಿ ಪ್ರಕಟ

ಬೆಂಗಳೂರು: ಕನ್ನಡ ಗೆಳೆಯರ ಬಳಗ ನೀಡುವ ವಾರ್ಷಿಕ ಪ್ರಶಸ್ತಿಗಳಾದ ಕನ್ನಡ ಅರವಿಂದ ಮತ್ತು ಕನ್ನಡ ಚಿರಂಜೀವಿ ಪ್ರಶಸ್ತಿಗಳನ್ನು ಪ್ರಕಟಿಸಲಾಗಿದ್ದು, 2022ನೇ ಸಾಲಿನ ಕನ್ನಡ ಅರವಿಂದ ಪ್ರಶಸ್ತಿಗೆ ಬಾ.ಹ.ರಮಾಕುಮಾರಿ ಮತ್ತು ಕನ್ನಡ ಚಿರಂಜೀವಿ ಪ್ರಶಸ್ತಿಗೆ ಫಾ. ಬಾರ್ತಲೋಮಿಯೋ ಆಯ್ಕೆಯಾಗಿದ್ದಾರೆ.





ಡಿ. 7ರಂದು ಶೇಷಾದ್ರಿಪುರ ಕಾಲೇಜು ಸಭಾಂಗಣದಲ್ಲಿ ನಡೆಯಲಿರುವ ಕನ್ನಡ ಗೆಳೆಯರ ಬಳಗದ ಕನ್ನಡ ಚಿಂತನ ಸಮಾರಂಭದಲ್ಲಿ ಪ್ರಶಸ್ತಿ ಪ್ರದಾನ ಮಾಡಲಾಗುವುದು. ಕಾರ್ಯಕ್ರಮದಲ್ಲಿ ಕನ್ನಡ ಮಾಧ್ಯಮದಲ್ಲಿ ಓದಿ ಹೆಚ್ಚು ಅಂಕಗಳಿಸಿದ ಮಕ್ಕಳಿಗೆ ಬಹುಮಾನ, ಸನ್ಮಾನ ಮಾಡಲಾಗುವುದು. ವೂಡೇ ಪಿ. ಕೃಷ್ಣ, ರಾಜ್ಯಸಭೆ ಸದಸ್ಯ, ಡಾ.ಎಲ್.ಹನುಮಂತಯ್ಯ, ನಾಡೋಜ ಗೊ.ರು. ಚನ್ನಬಸಪ್ಪ, ಹಿರಿಯ ಸಂಶೋಧಕ ಡಾ.ಆರ್. ಶೇಷಶಾಸ್ತ್ರಿ ಮತ್ತಿತರರು ಪಾಲ್ಗೊಳ್ಳಲಿದ್ದಾರೆ ಎಂದು ಬಳಗದ ಸಂಚಾಲಕ ರಾ.ನಂ.ಚಂದ್ರಶೇಖರ್ ತಿಳಿಸಿದ್ದಾರೆ.

ಬೆಳಗಾವಿಯ ಕನ್ನಡಪರ ಹೋರಾಟಕ್ಕೆ ಗಟ್ಟಿ ನೆಲೆ ಒದಗಿಸಿದ ಪತ್ರಕರ್ತ ಅರವಿಂದರಾಯ ಜೋಶಿ ಹೆಸರಿನಲ್ಲಿ ಕನ್ನಡ ಅರವಿಂದ ಮತ್ತು ಅಪರೂಪದ ಕನ್ನಡ ಪರಿಚಾರಕ, ಅಬಕಾರಿ ಇಲಾಖೆ ಅಧಿಕಾರಿಯಾಗಿದ್ದ ಅಲ್ಲ ಚಿರಂಜೀವಿ ಅವರ ಹೆಸರಿನಲ್ಲಿ ಕನ್ನಡ ಅರವಿಂದ ಪ್ರಶಸ್ತಿಗಳನ್ನು ಕನ್ನಡ ಗೆಳೆಯರ ಬಳಗ ಪ್ರತಿ ವರ್ಷ ನೀಡುತ್ತಿದೆ. ಈ ಬಾರಿ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಸೇವೆ ಸಲ್ಲಿಸಿದ್ದಲ್ಲದೆ, ಕನ್ನಡಪರ ಹೋರಾಟದಲ್ಲಿ ತೊಡಗಿಕೊಂಡಿರುವ ಬಾ.ಹ.ರಮಾಕುಮಾರಿ ಅವರಿಗೆ ಕನ್ನಡ ಅರವಿಂದ ಪ್ರಶಸ್ತಿ ಮತ್ತು ವಿದ್ಯಾರ್ಥಿ ದೆಸೆಯಿಂದಲೇ ಕನ್ನಡಪರ ಹೋರಾಟದಲ್ಲಿ ತೊಡಗಿಕೊಂಡಿರುವ, ಮೌನಮಾತು ಪತ್ರಿಕೆ ಮೂಲಕ ಕನ್ನಡ ಜಾಗೃತಿಗೆ ಶ್ರಮಿಸಿದ ಫಾ.ಬಾರ್ತಲೋಮಿಯೋ ಅವರಿಗೆ ಕನ್ನಡ ಚಿರಂಜೀವಿ ಪ್ರಶಸ್ತಿ ನೀಡಲಾಗುತ್ತಿದೆ.

**ವಿಶ್ವವಾಣಿ**

17.11.2022 ಗುರುವಾರ.

**ವಿಜಯ ಕರ್ನಾಟಕ**

# ಕನ್ನಡ ಅರವಿಂದ ಪ್ರಶಸ್ತಿ ಪ್ರಕಟ

■ ವಿಕ ಸುದ್ದಿಲೋಕ ಬೆಂಗಳೂರು

ಕನ್ನಡ ಗೆಳೆಯರ ಬಳಗದ ವತಿಯಿಂದ ನೀಡಲಾಗುವ 'ಕನ್ನಡ ಅರವಿಂದ ಪ್ರಶಸ್ತಿ'ಗೆ ಲೇಖಕಿ ಬಾ.ಹ. ರಮಾಕುಮಾರಿ ಹಾಗೂ 'ಕನ್ನಡ ಚಿರಂಜೀವಿ ಪ್ರಶಸ್ತಿ'ಗೆ ಕನ್ನಡಪರ ಹೋರಾಟಗಾರ ಬಾರ್ತಲೋಮಿಯೋ ಆಯ್ಕೆಯಾಗಿದ್ದಾರೆ.



ರಮಾಕುಮಾರಿ



ಬಾರ್ತಲೋಮಿಯೋ

ಶೇಷಾದ್ರಿಪುರ ಕಾಲೇಜಿನ ಸಭಾಂಗಣದಲ್ಲಿ ಡಿ. 7ರಂದು ಪ್ರಶಸ್ತಿ ಪ್ರದಾನ ಸಮಾರಂಭ ಹಮ್ಮಿಕೊಳ್ಳಲಾಗಿದೆ.. ಇದೇ ವೇಳೆ ಕನ್ನಡ ಮಾಧ್ಯಮದಲ್ಲಿ ಓದಿ, ಅಧಿಕ ಅಂಕಗಳನ್ನು ಗಳಿಸಿರುವ ವಿದ್ಯಾರ್ಥಿಗಳನ್ನು ಸನ್ಮಾನಿಸಲಾಗುವುದು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ರಾಜ್ಯಸಭಾ ಸದಸ್ಯ ಎಲ್. ಹನುಮಂತಯ್ಯ ಹಾಗೂ ಜಾನಪದ ವಿದ್ವಾಂಸ ಗೊ.ರು. ಚನ್ನಬಸಪ್ಪ ಅವರು ಪ್ರಶಸ್ತಿ ಪ್ರದಾನ ಮಾಡಲಿದ್ದಾರೆ ಎಂದು ಬಳಗದ ಸಂಚಾಲಕ ರಾ.ನಂ. ಚಂದ್ರಶೇಖರ ತಿಳಿಸಿದ್ದಾರೆ.

# ರಮಾಕುಮಾರಿ, ಬಾರ್ತಲೋಮಿಯೋಗೆ ಪ್ರಶಸ್ತಿ

ಪ್ರಜಾವಾಣಿ ವಾರ್ತೆ

ಬೆಂಗಳೂರು: ಕನ್ನಡ ಗೆಳೆಯರ ಬಳಗ ನೀಡುವ 'ಕನ್ನಡ ಅರವಿಂದ ಪ್ರಶಸ್ತಿ'ಗೆ ಲೇಖಕಿ ಬಾ.ಹ. ರಮಾಕುಮಾರಿ ಹಾಗೂ 'ಕನ್ನಡ ಚಿರಂಜೀವಿ ಪ್ರಶಸ್ತಿ'ಗೆ ಕನ್ನಡ ಪರ ಹೋರಾಟಗಾರ ಫಾ. ಬಾರ್ತಲೋಮಿಯೋ ಆಯ್ಕೆಯಾಗಿದ್ದಾರೆ.

ಡಿ.7ರಂದು ಶೇಷಾದ್ರಿಪುರ ಕಾಲೇಜಿನ ಸಭಾಂಗಣದಲ್ಲಿ ಪ್ರಶಸ್ತಿ ಪ್ರದಾನ ಸಮಾರಂಭ ಹಮ್ಮಿಕೊಳ್ಳಲಾಗಿದೆ. ಇದೇ ವೇಳೆ ಕನ್ನಡ ಮಾಧ್ಯಮದಲ್ಲಿ ಓದಿ, ಅಧಿಕ ಅಂಕ ಪಡೆದ ವಿದ್ಯಾರ್ಥಿಗಳನ್ನು ಸನ್ಮಾನಿಸಲಾಗುವುದು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಅವರು ಸಮಾರಂಭದ ಅಧ್ಯಕ್ಷತೆ ವಹಿಸಲಿದ್ದಾರೆ. ರಾಜ್ಯಸಭೆ ಸದಸ್ಯ ಎಲ್. ಹನುಮಂತಯ್ಯ ಹಾಗೂ ಜಾನಪದ ವಿದ್ವಾಂಸ ಗೊ.ರು. ಚನ್ನಬಸಪ್ಪ ಅವರು ಪ್ರಶಸ್ತಿ ಪ್ರದಾನ ಮಾಡಲಿದ್ದಾರೆ ಎಂದು ಬಳಗದ ಸಂಚಾಲಕ ರಾ.ನಂ. ಚಂದ್ರಶೇಖರ ತಿಳಿಸಿದ್ದಾರೆ.

**ವಿಜಯವಾಣಿ**

# ಕನ್ನಡ ಗೆಳೆಯರ ಬಳಗದ ಪ್ರಶಸ್ತಿಗಳು ಪ್ರಕಟ





ಬೆಂಗಳೂರು: ಕನ್ನಡ ಗೆಳೆಯರ ಬಳಗ ವತಿಯಿಂದ ನೀಡಲಾಗುವ 'ಕನ್ನಡ ಅರವಿಂದ ಪ್ರಶಸ್ತಿ'ಗೆ ಲೇಖಕಿ ಬಾ.ಹ. ರಮಾಕುಮಾರಿ ಹಾಗೂ 'ಕನ್ನಡ ಚಿರಂಜೀವಿ ಪ್ರಶಸ್ತಿ'ಗೆ ಕನ್ನಡಪರ ಹೋರಾಟಗಾರ ಫಾ. ಬಾರ್ತಲೋಮಿಯೋ ಆಯ್ಕೆಯಾಗಿದ್ದಾರೆ. ಶೇಷಾದ್ರಿಪುರ ಕಾಲೇಜಿನ ಸಭಾಂಗಣದಲ್ಲಿ ಡಿ. 7ರಂದು ಪ್ರಶಸ್ತಿ ಪ್ರದಾನ ಸಮಾರಂಭ ಹಮ್ಮಿಕೊಳ್ಳಲಾಗಿದೆ. ಇದೇ ವೇಳೆ ಕನ್ನಡ ಮಾಧ್ಯಮದಲ್ಲಿ ಓದಿ, ಅಧಿಕ ಅಂಕ ಗಳಿಸಿರುವ ವಿದ್ಯಾರ್ಥಿಗಳನ್ನು ಸನ್ಮಾನಿಸಲಾಗುವುದು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ರಾಜ್ಯಸಭಾ ಸದಸ್ಯ ಎಲ್. ಹನುಮಂತಯ್ಯ ಹಾಗೂ ಜಾನಪದ ವಿದ್ವಾಂಸ ಗೊ.ರು. ಚನ್ನಬಸಪ್ಪ ಪ್ರಶಸ್ತಿ ಪ್ರದಾನ ಮಾಡಲಿದ್ದಾರೆ ಎಂದು ಬಳಗದ ಸಂಚಾಲಕ ರಾ.ನಂ. ಚಂದ್ರಶೇಖರ ತಿಳಿಸಿದ್ದಾರೆ.

**ಸಂಯುಕ್ತ ಕರ್ನಾಟಕ**

# ಕನ್ನಡ ಅರವಿಂದ–ಚಿರಂಜೀವಿ ಪ್ರಶಸ್ತಿಗೆ ಸಾಧಕರ ಆಯ್ಕೆ

ಬೆಂಗಳೂರು: ಕನ್ನಡ ಗೆಳೆಯರ ಬಳಗದ [illegible] ಕನ್ನಡ ಅರವಿಂದ ಮತ್ತು ಕನ್ನಡ ಚಿರಂಜೀವಿ ಪ್ರಶಸ್ತಿ [illegible] ಕನ್ನಡ ಅರವಿಂದ ಪ್ರಶಸ್ತಿಗೆ [illegible] ಮಾಕುಮಾರಿ ಹಾಗೂ ಕನ್ನಡ ಚಿರಂಜೀವಿ [illegible] ಫಾದರ್ ಬಾರ್ತಲೋಮಿಯೋ ಅವರು ಆಯ್ಕೆಯಾಗಿದ್ದಾರೆ. [illegible] 7ರಂದು ಬೆಂಗಳೂರಿನ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಕನ್ನಡ ಗೆಳೆಯರ ಬಳಗದ [illegible] ಪ್ರದಾನ [illegible] ಸಮಾರಂಭದಲ್ಲಿ ಈ ಪ್ರಶಸ್ತಿಯನ್ನು ಕೊಡಮಾಡಲಾಗುವುದು ಎಂದು ಕನ್ನಡ ಗೆಳೆಯರ ಬಳಗದ ಸಂಚಾಲಕ ರಾ.ನಂ.ಚಂದ್ರಶೇಖರ ಪ್ರಕಟಣೆಯಲ್ಲಿ ತಿಳಿಸಿದ್ದಾರೆ.

ಉದಯವಾಣಿ 16-11

# ಪುಸ್ತಕ ಬಹುಮಾನಕ್ಕೆ ಆಯ್ಕೆ

ಬೆಂಗಳೂರು: ದಾವಣಗೆರೆಯ ಡಾ. ಮಲ್ಲಾ ಪ್ರಕಾಶ್ ಅವರ [illegible] ಕನ್ನಡ ಸಾಹಿತ್ಯದಲ್ಲಿ ಸಂಗೀತದ ಸಾಹಚರ್ಯ [illegible] ಕನ್ನಡ ಗೆಳೆಯರ ಬಳಗ ಕೊಡಮಾಡುವ 2022ನೇ ಸಾಲಿನ ಸಾಮಾನ್ಯ ಕನ್ನಡ ಜಾಗೃತಿ ಪುಸ್ತಕ ಬಹುಮಾನಕ್ಕೆ ಆಯ್ಕೆಯಾಗಿದೆ. ಡಿ.7ರಂದು ಶೇಷಾದ್ರಿಪುರ ಕಾಲೇಜಿನಲ್ಲಿ ನಡೆಯಲಿರುವ ಸಮಾರಂಭದಲ್ಲಿ 4 ಸಾವಿರ ರೂ. ನಗದು ಒಳಗೊಂಡ ಸಾಮಾನ್ಯ ಕನ್ನಡ ಜಾಗೃತಿ ಪುಸ್ತಕ ಬಹುಮಾನವನ್ನು ವಿದುಷಿ ಡಾ. ಮಲ್ಲಾ ಪ್ರಕಾಶ್ ಅವರಿಗೆ ಪ್ರದಾನ ಮಾಡಲಾಗುವುದು ಎಂದು ಗೆಳೆಯರ ಬಳಗದ ಸಂಚಾಲಕ ರಾ.ನಂ. ಚಂದ್ರಶೇಖರ್ ತಿಳಿಸಿದ್ದಾರೆ. ರಾಜ್ಯಸಭಾ ಸದಸ್ಯ ನಾಡೋಜ ಎಲ್. ಹನುಮಂತಯ್ಯ, ಗೊ.ರು. ಚನ್ನಬಸಪ್ಪ, ವೂಡೇ ಪಿ. ಕೃಷ್ಣ, ಸಂಶೋಧಕ ಡಾ. ಆರ್. ಶೇಷಶಾಸ್ತ್ರಿ ಉಪಸ್ಥಿತರಿರುತ್ತಾರೆಂದು ವಿವರಿಸಿದ್ದಾರೆ.

# ಅರವಿಂದ ಪ್ರಶಸ್ತಿಗೆ ಬಾ.ಹ. ರಮಾಕುಮಾರಿ ಆಯ್ಕೆ

ಈ ಸಂಜೆ 21-11-22



ಬೆಂಗಳೂರು, ನ.20: ಕನ್ನಡ ಗೆಳೆಯರ ಬಳಗ ವತಿಯಿಂದ ನೀಡುವ ಕನ್ನಡ ಅರವಿಂದ ಪ್ರಶಸ್ತಿಗೆ ಕನ್ನಡ ಪರಿಚಾರಕಿ ಬಾ.ಹ. ರಮಾಕುಮಾರಿ ಹಾಗೂ ಕನ್ನಡ ಚಿರಂಜೀವಿ ಪ್ರಶಸ್ತಿಗೆ ಹೋರಾಟಗಾರ ಫಾ. ಬಾರ್ತಲೋಮಿಯೋ ಆಯ್ಕೆ ಆಗಿದ್ದಾರೆ.

ಪ್ರಶಸ್ತಿ ಪ್ರದಾನ ಕಾರ್ಯಕ್ರಮವನ್ನು ಡಿ.7ರಂದು ನಗರದ ಶೇಷಾದ್ರಿಪುಂ ಕಾಲೇಜಿನ ಸಭಾಂಗಣದಲ್ಲಿ ಹಮ್ಮಿಕೊಳ್ಳಲಾಗಿದೆ. ಪ್ರಶಸ್ತಿ ಪ್ರದಾನ ಕಾರ್ಯಕ್ರಮದಲ್ಲಿ ರಾಜ್ಯಸಭಾ ಸದಸ್ಯ ಡಾ.ಎಲ್.ಹನುಮಂತಯ್ಯ, ನಾಡೋಜ ಗೊ.ರು.ಚನ್ನಬಸಪ್ಪ, ಹಿರಿಯ ಸಂಶೋಧಕ ಡಾ.ಆರ್.ಶೇಷಶಾಸ್ತ್ರಿ ಭಾಗವಹಿಸಲಿದ್ದಾರೆ ಎಂದು ಪ್ರಕಟಣೆ ತಿಳಿಸಿದೆ.

ಈ ಸಂಜೆ

Nov 20, 2022




ನಗರದ ಗಾಂಧಿ ಭವನದಲ್ಲಿಂದು ಆದಿಜಾಂಬವ ಜಾಗೃತಿ ಸಮಿತಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲಲಿ ಜಾಂಬವ ಜಗತ್ತಿನ ಚಿಗುರು ಮತ್ತು ಆದಿಜಾಂಬವರ ಕಥೆ ವ್ಯಥೆ ಕೃತಿಗಳನ್ನು ನಿಡುಮಾಮಿಡಿ ಮಠದ ಶ್ರೀ ವೀರಭದ್ರ ಚೆನ್ನಮಲ್ಲ ಸ್ವಾಮೀಜಿ ಅವರು ಬಿಡುಗಡೆ ಮಾಡಿದರು. ಗಾಂಧಿ ಸ್ಮಾರಕ ಭವನದ ಅಧ್ಯಕ್ಷ ಡಾ.ವೂಡೆ ಪಿ ಕೃಷ್ಣ, ನ್ಯಾಯಮೂರ್ತಿಗಳಾದ ಬಿ.ವೀರಪ್ಪ, ಜಮ್ಮು ಮತ್ತು ಕಾಶ್ಮೀರದ ನಿವೃತ್ತ ಮುಖ್ಯ ನ್ಯಾಯಾಧೀಶರಾದ ಎಂ.ರಾಮಕೃಷ್ಣಪ್ಪ, ನ್ಯಾ. ದೇವದಾಸ್ ಮತ್ತಿತರರಿದ್ದರು.

ಈ ಸಂಜೆ

Nov 19, 2022

# ಕನ್ನಡತನ ಕಾಪಾಡಿಕೊಳ್ಳಿ: ನಾಗಾಭರಣ



ಬೆಂಗಳೂರು, ನ.19 – ಜನಪದ ಸಂಸ್ಕೃತಿ ಕನ್ನಡದ ಮೂಲ ಸಂಸ್ಕೃತಿಯಾಗಿದೆ. ಕನ್ನಡದ ಅಸ್ಮಿತೆಯನ್ನು ಉಳಿಸಿ ಬೆಳೆಸಬೇಕು. ಕನ್ನಡತನವನ್ನು ಕಾಪಾಡಿಕೊಳ್ಳಬೇಕು ಎಂದು ಚಲನಚಿತ್ರ ನಿರ್ದೇಶಕ ಟಿ.ಎಸ್. ನಾಗಾಭರಣ ಅವರು ಯುವ ವಿದ್ಯಾರ್ಥಿಗಳಿಗೆ ಕಿವಿ ಮಾತು ಹೇಳಿದರು.

ಶೇಷಾದ್ರಿಪುರಂ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ 67ನೇ ಕನ್ನಡ ರಾಜ್ಯೋತ್ಸವದಲ್ಲಿ ಪಾಲ್ಗೊಂಡು ಮಾತನಾಡಿದ ಅವರು, ಕನ್ನಡಕ್ಕೆ ಮೂರು ಸಾವಿರ ವರ್ಷಗಳ ಇತಿಹಾಸವಿದೆ. ಕನ್ನಡ- ಕನ್ನಡಿಗ- ಕರ್ನಾಟಕ ಈ ಐಕ್ಯ ಮಂತ್ರವನ್ನು ಎಲ್ಲೆಡೆ ನಾವು ಪಸರಿಸಬೇಕು. ನಾವು ಕನ್ನಡಿಗರಿಗಾಗಿ ಎಂದೆಂದಿಗೂ ಕನ್ನಡವನ್ನು ಮಾತನಾಡಬೇಕು ಎಂದು ತಿಳಿಸಿದರು.

ನಾಡೋಜ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, ನಾವು ಕನ್ನಡಿಗರಾಗಿ ಕನ್ನಡದ ಬಗ್ಗೆ ಕೀಳರಿಮೆ ಬಿಡಬೇಕು. ಕನ್ನಡದ ಅಸ್ಮಿತೆಯನ್ನು ಉಳಿಸಬೇಕು ಎಂದು ತಿಳಿಸಿದರು.

ಸಮಾರಂಭದಲ್ಲಿ ಪ್ರಾಂಶುಪಾಲರಾದ ಡಾ. ಮೀರಾ, ಧರ್ಮದರ್ಶಿ ಮೃತ್ಯುಂಜಯ, ಸಹಾಯಕ ಕಾರ್ಯದರ್ಶಿ ನಟರಾಜ್, ಸಾಂಸ್ಕೃತಿಕ ಸಮಿತಿ ಸಂಚಾಲಕರಾದ ವಿನುತಾ ಹಾಗೂ ಉಪನ್ಯಾಸಕರು, ಸಿಬ್ಬಂದಿ ವರ್ಗದವರು ಪಾಲ್ಗೊಂಡಿದ್ದರು.

ಪ್ರಜಾವಾಣಿ ಗುರುವಾರ • ನವೆಂಬರ್ 17, 2022

# ರಮಾಕುಮಾರಿ, ಬಾರ್ತಲೋಮಿಯೋಗೆ ಪ್ರಶಸ್ತಿ

ಪ್ರಜಾವಾಣಿ ವಾರ್ತೆ

ಬೆಂಗಳೂರು: ಕನ್ನಡ ಗೆಳೆಯರ ಬಳಗ ನೀಡುವ 'ಕನ್ನಡ ಅರವಿಂದ ಪ್ರಶಸ್ತಿ'ಗೆ ಲೇಖಕಿ ಬಾ.ಹ. ರಮಾಕುಮಾರಿ ಹಾಗೂ 'ಕನ್ನಡ ಚಿರಂಜೀವಿ ಪ್ರಶಸ್ತಿ'ಗೆ ಕನ್ನಡ ಪರ ಹೋರಾಟಗಾರ ಫಾ. ಬಾರ್ತಲೋಮಿಯೋ ಆಯ್ಕೆಯಾಗಿದ್ದಾರೆ.

ಡಿ.7ರಂದು ಶೇಷಾದ್ರಿಪುರ ಕಾಲೇಜಿನ ಸಭಾಂಗಣದಲ್ಲಿ ಪ್ರಶಸ್ತಿ ಪ್ರದಾವ ಸಮಾರಂಭ ಹಮ್ಮಿಕೊಳ್ಳಲಾಗಿದೆ. ಇದೇ ವೇಳೆ ಕನ್ನಡ ಮಾಧ್ಯಮದಲ್ಲಿ ಓದಿ, ಅಧಿಕ ಅಂಕ ಪಡೆದ ವಿದ್ಯಾರ್ಥಿಗಳನ್ನು ಸನ್ಮಾನಿಸಲಾಗುವುದು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಅವರು ಸಮಾರಂಭದ ಅಧ್ಯಕ್ಷತೆ ವಹಿಸಲಿದ್ದಾರೆ. ರಾಜ್ಯಸಭೆ ಸದಸ್ಯ ಎಲ್. ಹನುಮಂತಯ್ಯ ಹಾಗೂ ಜಾನಪದ ವಿದ್ವಾಂಸ ಗೊ.ರು. ಚನ್ನಬಸಪ್ಪ ಅವರು ಪ್ರಶಸ್ತಿ ಪ್ರದಾನ ಮಾಡಲಿದ್ದಾರೆ ಎಂದು ಬಳಗದ ಸಂಚಾಲಕ ರಾ.ನಂ. ಚಂದ್ರಶೇಖರ ತಿಳಿಸಿದ್ದಾರೆ.

ಪ್ರಜಾವಾಣಿ ಬುಧವಾರ • ನವೆಂಬರ್ 9, 2022



ನಗರದಲ್ಲಿ ಮಂಗಳವಾರ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯ ಕನ್ನಡ ಕ್ರಿಯಾ ಸಮಿತಿ ಆಯೋಜಿಸಿದ್ದ ಸಮಾರಂಭದಲ್ಲಿ ನಾಡು ನುಡಿಗೆ ದುಡಿದ ಸಾರಿಗೆ ಸಂಸ್ಥೆ ಕಾರ್ಮಿಕರಿಗೆ 'ಸಾರಿಗೆ ಕನ್ನಡ ರತ್ನ ಪ್ರಶಸ್ತಿ'ಯನ್ನು ಕನ್ನಡ ಸಾಹಿತ್ ಪರಿಷತ್ ಮಾಜಿ ಅಧ್ಯಕ್ಷ ಮನು ಬಳಿಗಾರ ಪ್ರದಾನ ಮಾಡಿದರು. ಪ್ರಾಧ್ಯಾಪಕಿ ವತ್ಸಲಾ ಮೋಹನ್, ಎಸ್.ಎಚ್. ಭುವನೇಶ್ವರ್, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಕೇಂದ್ರ ಕನ್ನಡ ಕ್ರಿಯಾ ಸಮಿತಿಯ ರಾಜ್ಯಾಧ್ಯಕ್ಷ ವ.ಚ.ಚನ್ನೇಗೌಡ, ರಾಜ್ಯ ಪ್ರಧಾನ ಕಾರ್ಯದರ್ಶಿ ಕೆ.ಎನ್. ಪ್ರಭುಸ್ವಾಮಿ, ಎಸ್. ಮೋಹನ್ ಕುಮಾರ್, ರಾಜ್ಯ ಖಜಾಂಚಿ ಹುಸೈನ್ ಕೆ.ಎಸ್. ಎಂ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ ಇದ್ದಾರೆ.

—ಪ್ರಜಾವಾಣಿ ಚಿತ್ರ

ಪ್ರಜಾವಾಣಿ

ಭಾನುವಾರ ನವೆಂಬರ್ 6, 2022



## ಸಂಚಾರಿ ಆಸ್ಪತ್ರೆ

ಇನ್ಫೊಸಿಸ್ ಸಹಯೋಗದಲ್ಲಿ ರಾಮಕೃಷ್ಣ ಸೇವಾಶ್ರಮದ ವತಿಯಿಂದ ಶಾರದಾದೇವಿ ಸಂಚಾರಿ ಕಣ್ಣಿನ ಆಸ್ಪತ್ರೆಯನ್ನು ಶನಿವಾರ ಲೋಕಾರ್ಪಣೆಗೊಳಿಸಲಾಯಿತು. ಜಪಾನಂದ ಸ್ವಾಮೀಜಿ, ನಿವೃತ್ತ ನ್ಯಾಯಮೂರ್ತಿ ಎನ್.ಸಂತೋಷ್ ಹೆಗ್ಡೆ, ವೆಂಕಟಾಚಲಯ್ಯ, ರತ್ನಕಲಾ, ಪ್ರೊಡೇ ಪಿ. ಕೃಷ್ಣ, ಡಾ.ಭುಜಂಗ ಶೆಟ್ಟಿ, ಮಯ್ಯ, ವಿಶ್ವನಾಥ್, ಸುಬ್ಬರಾಮಶೆಟ್ಟಿ, ನಾಗಣ್ಣ, ಆರ್ ಪಿ ಎಸ್ ರೆಡ್ಡಿ ಇದ್ದರು.

ಕರುನಾಡ ಕಣ್ಣ 04-11-2022 Friday



ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ವತಿಯಿಂದ ಇಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ನಾಡೋಜ ಡಾ.ವೂಡೇ ಪಿ. ಕೃಷ್ಣ ಅವರು ಹೆಚ್.ಎ.ಎಲ್.ನ ಏರೋಇಂಜಿನ್ ವಿಭಾಗದ ಕರ್ನಾಟಕ ಕಲಾಸಂಘದ ನಿ.ಅಧ್ಯಕ್ಷರು ಕನ್ನಡ ಪರಚಿಂತಕರಾದ, ಟಿ.ಎನ್.ಸಾಯಿಕುಮಾರ್ ಅವರಿಗೆ ಕರ್ನಾಟಕ ಮದರ್ ತೆರೇಸಾ ಡಾ.ಎಸ್.ಜಿ.ಸುಶೀಲಮ್ಮ ದತ್ತಿ ಪ್ರಶಸ್ತಿ ಪ್ರದಾನ ಮಾಡಿ ಅಭಿನಂದಿಸಿದರು. ಚಿತ್ರದಲ್ಲಿ : ಸಂಸ್ಥೆಯ ಅಧ್ಯಕ್ಷರಾದ ಡಾ.ಎಸ್.ರಾಮಲಿಂಗೇಶ್ವರ (ಸಿಸಿರಾ) ಇದ್ದಾರೆ.

ವಿಶ್ವವಾಣಿ 28.10.2022 ಶುಕ್ರವಾರ
vishwavani.news

ನಾನು ಹಿಂದೂ ರಾಮಯ್ಯ ಕೃತಿ ಬಿಡುಗಡೆ ಮಾಡಿ ಸಿಎಂ ಬೊಮ್ಮಾಯಿ

# ಹಿರಿಯ ಪತ್ರಕರ್ತ ಪಿ.ರಾಮಯ್ಯ ಪತ್ರಿಕಾ ರಂಗದ ತಪಸ್ವಿ

**ಬೆಂಗಳೂರು:** ಹಿರಿಯ ಪತ್ರಕರ್ತ ಪಿ.ರಾಮಯ್ಯ ಅವರಿಗೆ ಸತ್ಯವೇ ಚಿಂತನೆ ಮತ್ತು ಆದರ್ಶ. ಅವರೊಬ್ಬ ಪತ್ರಿಕಾ ರಂಗದ ತಪಸ್ವಿ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹೇಳಿದ್ದಾರೆ.

ಗಾಂಧಿ ಭವನದಲ್ಲಿ ನಡೆದ ಕಾರ್ಯಕ್ರಮದಲ್ಲಿ ಅಭಿಮಾನಿ ಪ್ರಕಾಶನ ಪ್ರಕಟಿಸಿರುವ ಹಿರಿಯ ಪತ್ರಕರ್ತ ಪಿ.ರಾಮಯ್ಯ ಅವರ ಅನುಭವ ಕಥನ 'ನಾನು ಹಿಂದೂ ರಾಮಯ್ಯ' ಕೃತಿ ಲೋಕಾರ್ಪಣೆ ಮಾಡಿ ಮಾತನಾಡಿದರು. ರಾಮಯ್ಯ ಅವರು ಸತ್ಯವನ್ನು ಪ್ರಿಯವಾಗಿ ಹೇಳುವ ಸಜ್ಜನ ಪತ್ರಕರ್ತ. ಅವರ ಮನಸ್ಸಿನಲ್ಲಿ ಅಪ್ರಿಯ ಸತ್ಯಗಳು ಇದ್ದರೂ ಅದನ್ನು ಹೇಳದೆ ಸೌಜನ್ಯ ತೋರಿದರು. ರಾಜ್ಯದಲ್ಲಿ ನಡೆದ ಹಲವು ಘಟನೆಗಳಿಗೆ ಅವರು ಸಾಕ್ಷಿಯಾಗಿದ್ದಾರೆ. ಎರಡು ಪೀಳಿಗೆಯ ರಾಜಕಾರಣಿಗಳು ಹಾಗೂ ಮೂರು ಪೀಳಿಗೆಯ ಪತ್ರಕರ್ತರನ್ನು ನೋಡಿದ್ದಾರೆ. ಅವರು ಇದನ್ನು ರೋಚಕವಾಗಿ ಬರೆದು ಅವರು ಪ್ರಶಸ್ತಿಗೆ ಭಾಜನರಾಗಬಹುದಿತ್ತು. ಆದರೆ, ವಾಸ್ತವತೆಯನ್ನು ಮಾತ್ರ ಪುಸ್ತಕದಲ್ಲಿ ಬರೆದಿದ್ದಾರೆ ಎಂದರು. ಕೆಲವು ಜನರ ಚಿಂತನೆ ಮತ್ತು ವ್ಯಕ್ತಿತ್ವ ಬದಲಾಗುತ್ತವೆ. ಆದರೆ, ರಾಮಯ್ಯ ಅವರ ವ್ಯಕ್ತಿತ್ವ ಯಾವತ್ತೂ ಬದಲಾಗಿಲ್ಲ. ಅವರು ಶುದ್ಧ ಹಸ್ತ ಪತ್ರಕರ್ತರು. ಅವರ ಮುಗ್ಧತೆ ಬದಲಾಗಿಲ್ಲ. ಆತ್ಮಸಾಕ್ಷಿಯಿಂದ ಕೆಲಸ ಮಾಡಿದ್ದಾರೆ. ಅವರಿಗೆ ಸಾಕಷ್ಟು ಸವಾಲು ಎದುರಾಗಿರಬಹುದು. ಆದರೆ ವಾಸ್ತವತೆಯನ್ನು ಬರೆಯುವುದರಲ್ಲಿ ಎಂದೂ ಈಗಲೂ ರಾಜಿಯಾಗಿಲ್ಲ ಎಂದು ತಿಳಿಸಿದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ ಕೃತಿಯ ಲೇಖಕ ಪಿ.ರಾಮಯ್ಯ, ಅಭಿಮಾನಿ ಪ್ರಕಾಶನದ ಟಿ. ವೆಂಕಟೇಶ್, ಹಿರಿಯ ಪತ್ರಕರ್ತ ಹುಣಸವಾಡಿ ರಾಜನ್, ಮಾಧ್ಯಮ ಅಕಾಡೆಮಿ ಅಧ್ಯಕ್ಷ ಸದಾಶಿವ ಶೆಣೈ, ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷ ಶಿವಾನಂದ ತಗಡೂರು, ಬೆಂಗಳೂರು ಪ್ರೆಸ್ ಕ್ಲಬ್ ಅಧ್ಯಕ್ಷ ಶ್ರೀಧರ್, ವಾರ್ತಾ ಇಲಾಖೆ ನಿವೃತ್ತ ಜಂಟಿ ನಿರ್ದೇಶಕ ಎಚ್.ಬಿ. ದಿನೇಶ್ ಮತ್ತಿತರರು ಇದ್ದರು.


ಪಿ.ರಾಮಯ್ಯ ಅವರ ನಾನು ಹಿಂದೂ ರಾಮಯ್ಯ ಕೃತಿಯನ್ನು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಬಿಡುಗಡೆ ಮಾಡಿ ದರು. ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ ಕೃತಿಯ ಲೇಖಕ ಪಿ.ರಾಮಯ್ಯ, ಅಭಿಮಾನಿ ಪ್ರಕಾಶನದ ಟಿ. ವೆಂಕ ಟೇಶ್, ಮಾಧ್ಯಮ ಅಕಾಡೆಮಿ ಅಧ್ಯಕ್ಷ ಸದಾಶಿವ ಶೆಣೈ ಇದ್ದರು.

> ರಾಮಯ್ಯ ಅವರು ನಮ್ಮ ಕರ್ನಾಟಕದ ಆಸ್ತಿ, ಅವರ ಬರಹದಿಂದ ಸಾಕಷ್ಟು ಕಲಿಯುವುದಿದೆ. ರಾಮಯ್ಯನವರು ಸಮಾಜಮುಖಿಯಾಗಿ ಕೆಲಸ ಮಾಡಿದ್ದಾರೆ. ನಿಮ್ಮ ಪುಸ್ತಕ ಸಮಕಾಲೀನ ರಾಜಕಾರಣ ಮತ್ತು ಜನರ ಬದುಕು, ಸಮಾಜದ ಪರಿಸ್ಥಿತಿಯನ್ನು ಬಿಂಬಿಸುತ್ತಿದೆ. ನಾನು ಹಿಂದೂ ರಾಮಯ್ಯ ಪುಸ್ತಕದಿಂದ ಯುವಕರಿಗೆ ಪ್ರೇರಣೆ ದೊರೆಯಲಿದೆ.
>
> ಬಸವರಾಜ ಬೊಮ್ಮಾಯಿ
> ಸಿಎಂ

ನನಗೂ ರಾಮಯ್ಯಗೂ ಏಕಲವ್ಯ-ದ್ರೋಣಾಚಾರ್ಯ ರೀತಿ ನಂಟು: ಸಿಎಂ | ರಾಮಯ್ಯ ಅವರ 'ನಾನು ಹಿಂದೂ ರಾಮಯ್ಯ' ಕೃತಿ ಲೋಕಾರ್ಪಣೆ

# 2 ತಲೆಮಾರು ರಾಜಕಾರಣಿಗಳ ಜತೆ ಒಡನಾಟ ಹೊಂದಿದ್ದ ರಾಮಯ್ಯ

ಬೆಂಗಳೂರು: ಯಾವಾಗಲೂ ಆತ್ಮಸಾಕ್ಷಿಯಾಗಿ ನಡೆಯುವುದು ಬಹಳ ಕಷ್ಟ. ನಾವು ಆತ್ಮ ಸಾಕ್ಷಿಯಂತೆ ನಡೆದರೆ ಹಲವಾರು ವಿಘ್ನಗಳು, ಸಮಸ್ಯೆಗಳು ಎದುರಾಗುತ್ತಿರುತ್ತವೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹೇಳಿದರು.

ಅಭಿಮಾನಿ ಪ್ರಕಾಶನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಗುರುವಾರ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ ಹಿರಿಯ ಪತ್ರಕರ್ತ, ವಿಧಾನ ಪರಿಷತ್ತಿನ ಮಾಜಿ ಸದಸ್ಯ ಪಿ.ರಾಮಯ್ಯ ಅವರ 60 ವರ್ಷಗಳ ಅನುಭವ ಕಥನ 'ನಾನು ಹಿಂದೂ ರಾಮಯ್ಯ' ಕೃತಿ ಲೋಕಾರ್ಪಣೆಗೊಳಿಸಿ ಅವರು ಮಾತನಾಡಿದರು.

ಪಿ.ರಾಮಯ್ಯ ಅವರನ್ನು ಬಾಲ್ಯದಿಂದಲೇ ನಾನು ನೋಡಿ ಬೆಳೆದವನು. ಅವರೆಂದೂ ಆತ್ಮಸಾಕ್ಷಿಗೆ ವಂಚನೆ ಮಾಡಿ ಕೆಲಸ ಮಾಡಿದವರಲ್ಲ. ರಾಮಯ್ಯ ಪತ್ರಿಕೋದ್ಯಮದ ಮಾಸ್ಟರ್ ಪೀಸ್ ಎಂದು ಬಣ್ಣಿಸಿದರು.

ನನಗೆ ರಾಮಯ್ಯ ಅವರು ಏಕಲವ್ಯಗೆ ದ್ರೋಣಾಚಾರ್ಯರು ಇದ್ದಾಗ ಹಾಗೆ. ಬಾಲ್ಯದಲ್ಲೇ ಅವರ ಲೇಖನಗಳನ್ನು ಓದುತ್ತಾ ಬೆಳೆದಿದ್ದೇನೆ. ಅವುಗಳಿಂದ ಬಹಳಷ್ಟು ಕಲಿತಿದ್ದೇನೆ. ನನ್ನ ತಂದೆ ಅವರಿಗೂ ಬಹಳಷ್ಟು ಒಡನಾಟ ಇಟ್ಟುಕೊಂಡಿದ್ದರು. ಮಾಜಿ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ, ಎಚ್.ಡಿ.ದೇವೇಗೌಡ, ಜೆ.ಎಸ್.ಪಟೇಲ್ ಸೇರಿದಂತೆ ಸುಮಾರು ಎರಡು ತಲೆಮಾರುಗಳ ರಾಜಕಾರಣಿಗಳ ಜತೆ ಒಡನಾಟ ಹೊಂದಿದ್ದರು ಎಂದು ಸ್ಮರಿಸಿದರು.



ಸತ್ಯವನ್ನು ಕೂಡ ಪ್ರಿಯವಾಗಿ ಹೇಳುವ ಕಲೆ ರಾಮಯ್ಯ ಅವರಿಗೆ ಸಿದ್ಧಿಸಿತ್ತು. ಅವರ ಬದುಕಿನಲ್ಲಿ ಹೇಳ ಬೇಕಾಗಿರುವ ಘಟನೆಗಳು ಇನ್ನೂ ಬಹಳಷ್ಟಿವೆ. ಆದರೆ ಅವುಗಳನ್ನು ಎಲ್ಲೂ ಹೇಳಿಲ್ಲ. ಬೇರೆ ಯಾರಾದರೂ ಆಗಿದ್ದರೆ ತಮ್ಮ ಅಭಿಪ್ರಾಯನ್ನು ಸೇರಿಸಿ ಪ್ರಶಸ್ತಿಗೆ ಗಿಟ್ಟಿಸಿಕೊಳ್ಳುತ್ತಿದ್ದರು. ಆದರೆ ರಾಮಯ್ಯ ಅವರು ಹೇಗೆ ಮುಗ್ಧರಾಗಿದ್ದಾರೋ ಅದೇ ರೀತಿಯಲ್ಲಿ ಬರಹದಲ್ಲಿ ಮುಗ್ಧತೆ ಕಾಪಾಡಿಕೊಂಡಿದ್ದಾರೆ ಎಂದು ಹೇಳಿದರು.

## ಎಲ್ಲರ ಜೊತೆಗಿನ ಪ್ರೀತಿ ವಿಶ್ವಾಸವೇ ನನ್ನ ದೊಡ್ಡ ಆಸ್ತಿ

ಪಿ.ರಾಮಯ್ಯ ಮಾತನಾಡಿ, 45 ವರ್ಷಗಳ ಸುದೀರ್ಘ ಪತ್ರಿಕಾ ವೃತ್ತಿಯಲ್ಲಿ ಸಮಾಜದ ಎಲ್ಲ ವರ್ಗಗಳ ಪ್ರೀತಿ-ವಿಶ್ವಾಸ ಗಳಿಸಿರುವುದೇ ನನ್ನ ದೊಡ್ಡ ಆಸ್ತಿ. ಶಾಸಕಾಂಗ, ಕಾರ್ಯಾಂಗ ಮತ್ತು ಪತ್ರಿಕಾ ವಲಯದಲ್ಲಿ ಮರೆಯಲಾರದಂತಹ ಕ್ಷಣಗಳನ್ನು ನಾನು ಸಾಕಷ್ಟು ನೋಡಿದ್ದೇನೆ. ವಿಧಾನಸೌಧದ 4ನೇ ದರ್ಜೆ ನೌಕರನಿಂದ ಹಿಡಿದು ಮುಖ್ಯ ಕಾರ್ಯದರ್ಶಿವರೆಗೂ ಎಲ್ಲರ ಪ್ರೀತಿ-ವಿಶ್ವಾಸ ಗಳಿಸಿದ್ದೇನೆ ಎಂದು ಭಾವುಕರಾದರು.

ಕೃತಿ ಕುರಿತು ಮಾತನಾಡಿದ ಸಂಯುಕ್ತ ಕರ್ನಾಟಕ ಪ್ರಧಾನ ಸಂಪಾದಕ ಹುಣಸವಾಡಿ ರಾಜನ್, ಪಿ.ರಾಮಯ್ಯ ಅವರು ಮಾಜಿ ಮುಖ್ಯಮಂತ್ರಿ ದೇವರಾಜ ಅರಸು ಅವರೊಂದಿಗಿನ ಅನುಭವವನ್ನು ಕೇಳುವಾಗ ಸಮಗ್ರ ದೃಷ್ಟಿಯಿಂದ ಅವರು ವ್ಯಕ್ತಿ ನೋಡಿದ್ದಾರೆ. ಮಾಜಿ ಪ್ರಧಾನಿ ದೇವೇಗೌಡರ ಜೊತೆಗಿನ ಒಡನಾಟ ಮತ್ತು ಸಂಬಂಧದ ಬಗ್ಗೆಯೂ ಸುದೀರ್ಘವಾಗಿ ಉಲ್ಲೇಖಿಸಿದ್ದಾರೆ ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ, ಅಭಿಮಾನಿ ಸಮೂಹ ಸಂಸ್ಥೆಗಳ ಅಧ್ಯಕ್ಷ ಟಿ.ವೆಂಕಟೇಶ್, ಕರ್ನಾಟಕ ಮಾಧ್ಯಮ ಅಕಾಡೆಮಿ ಅಧ್ಯಕ್ಷ ಸದಾಶಿವ ಶಣೈ, ಕರ್ನಾಟಕ ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷ ಶಿವಾನಂದ ತಗಡೂರು, ಪ್ರೆಸ್ ಕ್ಲಬ್ ಆಫ್ ಬೆಂಗಳೂರು ಅಧ್ಯಕ್ಷ ಆರ್.ಶ್ರೀಧರ್, ವಾರ್ತಾ ಇಲಾಖೆ ನಿವೃತ್ತ ಜಂಟಿ ನಿರ್ದೇಶಕ ದಿನೇಶ್ ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.

5A
ನಂ. 1 ಕನ್ನಡ ದಿನಪತ್ರಿಕೆ
VIJAYAVANI BENGALURU
ಶುಕ್ರವಾರ 28 ಅಕ್ಟೋಬರ್ 2022
28 OCTOBER 2022

### ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಕರೆ । 'ನಾನು ಹಿಂದೂ ರಾಮಯ್ಯ' ಕೃತಿ ಲೋಕಾರ್ಪಣೆ

# ಪತ್ರಕರ್ತರು ಸತ್ಯ ಆಧಾರಿತ- ಪರಿಣಾಮಕಾರಿ ವರದಿ ಮಾಡಲಿ

▪ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಪತ್ರಕರ್ತ ಸತ್ಯ ಹಾಗೂ ಅದರ ಪರಿಣಾಮ ಗಮನದಲ್ಲಿಟ್ಟುಕೊಂಡು ವರದಿ ಮಾಡಬೇಕು. ಇಂತಹ ವರದಿಗಾರಿಕೆಗೆ ಹೆಸರಾದ ಪಿ. ರಾಮಯ್ಯ ಪತ್ರಿಕೋದ್ಯಮದ ಒಬ್ಬ ತಪಸ್ವಿ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಬಣ್ಣಿಸಿದ್ದಾರೆ.

ಗಾಂಧಿ ಸ್ಮಾರಕ ನಿಧಿ ಹಾಗೂ ಅಭಿಮಾನಿ ಪ್ರಕಾಶನ ಸಹಯೋಗದಲ್ಲಿ ಗಾಂಧಿ ಭವನದಲ್ಲಿ ಗುರುವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ 'ನಾನು ಹಿಂದೂ ರಾಮಯ್ಯ' ಪುಸ್ತಕ ಬಿಡುಗಡೆ ಮಾಡಿ ಮಾತನಾಡಿದರು. ರಾಮಯ್ಯ ಅವರು ರಾಜಕೀಯದಲ್ಲಿ ಎರಡು ತಲೆಮಾರು ಹಾಗೂ ಪತ್ರಿಕೋದ್ಯಮದಲ್ಲಿ ಮೂರು ತಲೆಮಾರು ಕಂಡವರು. ಎಲ್ಲ ಮುಖ್ಯಮಂತ್ರಿಗಳೊಂದಿಗೆ ಆತ್ಮೀಯರಾಗಿದ್ದರು. ಆದರೂ ಯಾವುದೇ ಸಂಬಂಧವನ್ನು ಅವರು ತಮ್ಮ ಸ್ವಂತಕ್ಕೆ ಬಳಸಿಕೊಳ್ಳದ ಶುದ್ಧ ಪತ್ರಕರ್ತ ಎಂದರು.

ರಾಮಯ್ಯರ ಬರಹ ಮತ್ತು ವರದಿಯಿಂದ ಬಹಳಷ್ಟು ಕಲಿಯುವುದಿದೆ. ಅವರು ನೀರಾವರಿ ಮತ್ತು ವಿದ್ಯುತ್ ಕುರಿತು ಬರೆದಿರುವ ವರದಿಗಳು ಅಧ್ಯಯನಶೀಲವಾದದ್ದು. ಅವರ ಬರಹ ಯುವ ರಾಜಕಾರಣಿಗಳಿಗೆ ಹಾಗೂ ಯುವ ಪತ್ರಕರ್ತರಿಗೆ ಪ್ರೇರಣೆಯಾಗಲಿದೆ ಎಂದರು. 'ನಾನು ಹಿಂದೂ ರಾಮಯ್ಯ' ಕೃತಿಯಲ್ಲಿ ಅವರು ಹೇಳಿರುವುದಕ್ಕಿಂತ 10-20 ಪಟ್ಟು ಹೇಳದಿರುವುದೂ ಇದೆ. ತಮ್ಮ ಬರಹದ ಮೂಲಕ ಸತ್ಯವನ್ನು



ಗಾಂಧಿ ಭವನದಲ್ಲಿ ಗುರುವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ 'ನಾನು ಹಿಂದೂ ರಾಮಯ್ಯ' ಪುಸ್ತಕವನ್ನು ಬಸವರಾಜ ಬೊಮ್ಮಾಯಿ ಬಿಡುಗಡೆ ಮಾಡಿದರು. ಡಾ. ವೂಡೇ ಪಿ. ಕೃಷ್ಣ, ಟಿ. ವೆಂಕಟೇಶ್ ಮತ್ತಿತರರು ಉಪಸ್ಥಿತರಿದ್ದರು.

ಪ್ರಿಯವಾಗಿ ಹೇಳುತ್ತಿದ್ದ ರಾಮಯ್ಯ ಅವರಿಗೆ ಸತ್ಯವೇ ಐಡಿಯಾ ಮತ್ತು ಐಡಿಯಾಲಜಿ ಆಗಿತ್ತು ಎಂದರು.

ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, 'ನಾನು ಹಿಂದೂ ರಾಮಯ್ಯ' ಕೃತಿಯು ಪತ್ರಿಕೋದ್ಯಮ ವಿದ್ಯಾರ್ಥಿಗಳಿಗೆ ಪರಾಮರ್ಶನ ಗ್ರಂಥವಾಗಲಿದೆ ಎಂದರು. ಪಿ. ರಾಮಯ್ಯ ದಂಪತಿಯನ್ನು ಅಭಿನಂದಿಸಲಾಯಿತು. ಅಭಿಮಾನಿ ಸಮೂಹ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕ ಟಿ. ವೆಂಕಟೇಶ್, ಗಾಂಧಿ ಸ್ಮಾರಕ ನಿಧಿಯ ಕೋಶಾಧ್ಯಕ್ಷ ಎಚ್.ಬಿ. ದಿನೇಶ್, ಮಾಧ್ಯಮ ಅಕಾಡೆಮಿ ಅಧ್ಯಕ್ಷ ಸದಾಶಿವ ಶೆಣೈ, ಬೆಂಗಳೂರು ಪ್ರೆಸ್ ಕ್ಲಬ್ ಅಧ್ಯಕ್ಷ ಆರ್. ಶ್ರೀಧರ್, ಕರ್ನಾಟಕ ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷ ಶಿವಾನಂದ ತಗಡೂರು ಮತ್ತಿತರರು ಉಪಸ್ಥಿತರಿದ್ದರು.

### ಏಕಲವ್ಯ ದ್ರೋಣರ ಸಂಬಂಧ

ಪಿ.ರಾಮಯ್ಯ ಹಾಗೂ ನನ್ನ ನಡುವಿನ ಸಂಬಂಧ ಏಕಲವ್ಯ ಹಾಗೂ ದ್ರೋಣಚಾರ್ಯರ ಸಂಬಂಧದಂತೆ. ತಂದೆ ಎಸ್.ಆರ್. ಬೊಮ್ಮಾಯಿ ಅವರೊಂದಿಗೆ ರಾಮಯ್ಯ ಅವರ ಮಾತುಕತೆ ಕೇಳುತ್ತ, ರಾಜಕಾರಣಿಗಳೊಂದಿಗಿನ ಅವರ ಸಂಪರ್ಕ ಮತ್ತು ಒಡನಾಟ ನೋಡುತ್ತ ಹಾಗೂ ಅವರ ಬರಹಗಳನ್ನು ಓದುತ್ತ ಬೆಳೆದವನು. ಹೀಗಾಗಿ ಅವರು ನನ್ನ ಬಗೆಗೆ ತಿಳಿದಿರುವುದಕ್ಕಿಂತ ಹೆಚ್ಚು ಕಲಿಸಿದ್ದಾರೆ ಎಂದು ಬಸವರಾಜ ಬೊಮ್ಮಾಯಿ ಹೇಳಿದರು.

ಎಸ್.ಎಂ. ಕೃಷ್ಣ ಅವಧಿಯಲ್ಲಿ ಸಣ್ಣ ಹಾಗೂ ಮಧ್ಯಮ ಪತ್ರಿಕೆಗಳಿಗೆ ಆರ್ಥಿಕ ನೆರವು ನೀಡುವ ಕುರಿತು ನನ್ನ ಅಧ್ಯಕ್ಷತೆಯಲ್ಲಿ ರಚನೆಯಾಗಿದ್ದ ಸಮಿತಿಯು ಜಿಲ್ಲಾ ಹಾಗೂ ಸಣ್ಣ ಪತ್ರಿಕೆಗಳ ಬೆಳವಣಿಗೆಗೆ ಪೂರಕವಾಗಿ ನೀಡಿರುವ ವರದಿಯನ್ನು ಹಾಲಿ ಸರ್ಕಾರ ಕೂಡಲೇ ಜಾರಿಗೊಳಿಸಲಿ.

। ಪಿ.ರಾಮಯ್ಯ ಹಿರಿಯ ಪತ್ರಕರ್ತ

ವಿಜಯ ಕರ್ನಾಟಕ VK | ನಮ್ಮ ಬೆಂಗಳೂರು | ಶುಕ್ರವಾರ, 28 ಅಕ್ಟೋಬರ್ 2022

## 'ನಾನು ಹಿಂದೂ ರಾಮಯ್ಯ' ಪುಸ್ತಕ ಬಿಡುಗಡೆ ಮಾಡಿ ಸಿಎಂ ಅಭಿಮತ

# ಪತ್ರಕರ್ತರಿಗೆ ಪರಿಣಾಮದ ಅರಿವಿರಲಿ

■ ವಿಕ ಸುದ್ದಿಲೋಕ ಬೆಂಗಳೂರು

ಪತ್ರಕರ್ತರು ಎಷ್ಟೋ ವಿಚಾರಗಳನ್ನು ಬರಹದ ಮೂಲಕ ಅಭಿವ್ಯಕ್ತಿಪಡಿಸುವಾಗ ಅದರ ಇತಿಮಿತಿ ಹಾಗೂ ಪರಿಣಾಮಗಳ ಬಗ್ಗೆ ಯೋಚಿಸಬೇಕು ಎಂಬುದನ್ನು ಪಿ. ರಾಮಯ್ಯ ಅವರನ್ನು ನೋಡಿ ಕಲಿಯಬೇಕಿದೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅಭಿಪ್ರಾಯಪಟ್ಟರು.

ಗಾಂಧಿ ಭವನದಲ್ಲಿ ನಡೆದ ಕಾರ್ಯಕ್ರಮ



ಗಾಂಧಿಭವನದಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ 'ನಾನು ಹಿಂದೂ ರಾಮಯ್ಯ' ಪುಸ್ತಕ ಬಿಡುಗಡೆ ಮಾಡಲಾಯಿತು.

ಅಭಿಮಾನಿ ಪ್ರಕಾಶನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯಿಂದ ಗಾಂಧಿಭವನದಲ್ಲಿ ಗುರುವಾರ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಹಿರಿಯ ಪತ್ರಕರ್ತ ಪಿ. ರಾಮಯ್ಯ ಅವರ 'ನಾನು ಹಿಂದೂ ರಾಮಯ್ಯ' ಪುಸ್ತಕ ಬಿಡುಗಡೆ ಮಾಡಿ ಅವರು ಮಾತನಾಡಿದರು.

''ಪಿ. ರಾಮಯ್ಯ ಅವರ ಸ್ಥಾನದಲ್ಲಿ ಬೇರೆ ಯಾರೇ ಇದ್ದರೂ ಈ ಪುಸ್ತಕವನ್ನು ರೋಚಕವಾಗಿ ಬರೆದು ದೊಡ್ಡ ಪ್ರಶಸ್ತಿಗೆ ಭಾಜನರಾಗುತ್ತಿದ್ದರು. ಅಷ್ಟೊಂದು ಅನುಭವದ ಬುತ್ತಿ ಅವರಲ್ಲಿದೆ. ಅವರೆಂದೂ ವೃತ್ತಿಧರ್ಮವನ್ನು ಬಿಟ್ಟುಕೊಟ್ಟಿಲ್ಲ ಎಂಬುದನ್ನು ಈ ಪುಸ್ತಕದ ಮೂಲಕ ತೋರಿಸಿದ್ದಾರೆ. ಅವರು ಮಾಜಿ ಸಿಎಂ ಎಸ್. ನಿಜಲಿಂಗಪ್ಪ ಅವರಿಂದ ಇಲ್ಲಿವರೆಗೆ ಅನೇಕ ಮುಖ್ಯಮಂತ್ರಿಗಳನ್ನು ನೋಡಿದ್ದಾರೆ. ಅವರೆಲ್ಲರ ಜತೆ ಉತ್ತಮ ಸಂಬಂಧ ಹೊಂದಿದ್ದರು. ಆದರೆ, ಈ ಸಂಬಂಧಗಳನ್ನು ಸ್ವಂತಕ್ಕಾಗಿ ಬಳಕೆ ಮಾಡಿಕೊಳ್ಳದ ಶುದ್ಧಹಸ್ತ ಪತ್ರಕರ್ತರಾಗಿದ್ದಾರೆ,'' ಎಂದು ಶ್ಲಾಘಿಸಿದರು.

ಹಿರಿಯ ಪತ್ರಕರ್ತ ಪಿ. ರಾಮಯ್ಯ ಮಾತನಾಡಿ, ''ತಾಲೂಕು ಮತ್ತು ಜಿಲ್ಲಾ ಮಟ್ಟದ ಸಣ್ಣ ಪತ್ರಿಕೆಗಳನ್ನು ಉಳಿಸಬೇಕಿದೆ. ಈ ಹಿಂದೆ ಎಸ್.ಎಂ. ಕೃಷ್ಣ ಅವರು ಸಿಎಂ ಆಗಿದ್ದ ವೇಳೆಯಲ್ಲಿ ಸಣ್ಣ ಮಟ್ಟದ ಪತ್ರಿಕೆಗಳ ಅಭಿವೃದ್ಧಿಗೆ ಸಲಹಾ ಸಮಿತಿ ರಚಿಸಿ ಅದಕ್ಕೆ ನನ್ನನ್ನು ಅಧ್ಯಕ್ಷನನ್ನಾಗಿ ಮಾಡಿದ್ದರು. ರಾಜ್ಯದ 20 ಜಿಲ್ಲೆಗಳಲ್ಲಿ ಸುತ್ತಿ ಸಣ್ಣ ಪತ್ರಿಕೆಗಳ ಅಭಿವೃದ್ಧಿಗೆ ಪೂರಕವಾದ ಅಂಶಗಳ ಜಾರಿಗೆ ಶಿಫಾರಸು ಮಾಡಲಾಗಿತ್ತು. ಇದರಲ್ಲಿ ಕೆಲವು ಜಾರಿಗೊಂಡಿದ್ದರೆ, ಇನ್ನೂ ಕೆಲವು ಜಾರಿಯಾಗಿಲ್ಲ. ಹಾಗಾಗಿ, ಜಾಹೀರಾತು ನೆಚ್ಚದೆ ಪತ್ರಿಕೆ ಉಳಿವಿಗೆ ಪೂರಕವಾಗಿರುವ ಸೌಲಭ್ಯಗಳನ್ನು ಜಾರಿಗೊಳಿಸಬೇಕು,'' ಎಂದು ಸಿಎಂ ಬೊಮ್ಮಾಯಿ ಅವರಲ್ಲಿ ಮನವಿ ಮಾಡಿದರು.

ಕಾರ್ಯಕ್ರಮದಲ್ಲಿ ಹಿರಿಯ ಪತ್ರಕರ್ತ ಹುಣಸವಾಡಿ ರಾಜನ್, ಕರ್ನಾಟಕ ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷ ಶಿವಾನಂದ ತಗಡೂರು, ಕರ್ನಾಟಕ ಮಾಧ್ಯಮ ಅಕಾಡೆಮಿ ಅಧ್ಯಕ್ಷ ಸದಾಶಿವ ಶೆಣೈ, ಅಭಿಮಾನಿ ಸಮೂಹ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕ ಟಿ. ವೆಂಕಟೇಶ್, ಪ್ರೆಸ್‌ಕ್ಲಬ್ ಅಧ್ಯಕ್ಷ ಆರ್. ಶ್ರೀಧರ್ ಮತ್ತಿತರರು ಉಪಸ್ಥಿತರಿದ್ದರು.

ಹಿರಿಯ ಪತ್ರಕರ್ತ ಪಿ. ರಾಮಯ್ಯ ಅವರ 'ನಾನು ಹಿಂದೂ ರಾಮಯ್ಯ' ಕೃತಿಯು ಪತ್ರಿಕೋದ್ಯಮ ವಿದ್ಯಾರ್ಥಿಗಳಿಗೆ ಪರಾಮರ್ಶನ ಗ್ರಂಥವಾಗಲಿದೆ. ಇದೊಂದು ಕನ್ನಡದ ಸೊಗಸಾದ ಕೃತಿಯಾಗಿದೆ.

– ಡಾ. ವೂಡೇ ಪಿ. ಕೃಷ್ಣ ಅಧ್ಯಕ್ಷ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ

ಕನ್ನಡಪ್ರಭ
ಶುಕ್ರವಾರ 28.10.2022

# 'ರಾಮಯ್ಯ ಶಿಸ್ತು ಅನುಕರಣೀಯ'




ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ಗಾಂಧಿಭವನದಲ್ಲಿ ಅಭಿಮಾನಿ ಪ್ರಕಾಶನ ಪ್ರಕಟಿಸಿರುವ ಹಿರಿಯ ಪತ್ರಕರ್ತ ಪಿ.ರಾಮಯ್ಯ ಅವರ ಅನುಭವ ಕಥನ 'ನಾನು ಹಿಂದೂ ರಾಮಯ್ಯ' ಕೃತಿಯನ್ನು ಲೋಕಾರ್ಪಣೆ ಮಾಡಿದರು.

**ನಾನು ಹಿಂದೂ ರಾಮಯ್ಯ ಕೃತಿ ಬಿಡುಗಡೆ**

ಬೆಂಗಳೂರು: ಪತ್ರಿಕೋದ್ಯಮದಲ್ಲಿ ಆರು ದಶಕಗಳ ಸೇವೆ ಸಲ್ಲಿಸಿರುವ ಹಿರಿಯ ಪತ್ರಕರ್ತ ಪಿ.ರಾಮಯ್ಯ ಅವರ ಅನುಭವ, ಶಿಸ್ತು, ಪ್ರಾಮಾಣಿಕತೆ ಮತ್ತು ಸತ್ಯನಿಷ್ಠ ವರದಿಗಾರಿಕೆ ಯುವ ಪತ್ರಕರ್ತರಿಗೆ ಮಾರ್ಗದರ್ಶನೀಯ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಸಲಹೆ ನೀಡಿದರು.

ಕುಮಾರಕೃಪಾ ರಸ್ತೆಯಲ್ಲಿರುವ ಗಾಂಧಿ ಭವನದಲ್ಲಿ ಅಭಿಮಾನಿ ಪ್ರಕಾಶನ ಪ್ರಕಟಿಸಿರುವ ಹಿರಿಯ ಪತ್ರಕರ್ತ ಪಿ.ರಾಮಯ್ಯ ಅವರ ಅನುಭವ ಕಥನ 'ನಾನು ಹಿಂದೂ ರಾಮಯ್ಯ' ಕೃತಿಯನ್ನು ಲೋಕಾರ್ಪಣೆಮಾಡಿ ಮಾತನಾಡಿದರು. ಸುದೀರ್ಘ ಪತ್ರಿಕೋದ್ಯಮದ ನಂತರವೂ ರಾಮಯ್ಯ ಅವರ ವ್ಯಕ್ತಿತ್ವ ಬದಲಾಗಿಲ್ಲ ಎಂದರು. ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ಕೃತಿಯ ಲೇಖಕ ಪಿ. ರಾಮಯ್ಯ, ಅಭಿಮಾನಿ ಪ್ರಕಾಶನದ ಟಿ.ವೆಂಕಟೇಶ್, ಹಿರಿಯ ಪತ್ರಕರ್ತ ಹುಣಸವಾಡಿ ರಾಜನ್, ಮಾಧ್ಯಮ ಅಕಾಡೆಮಿ ಅಧ್ಯಕ್ಷ ಸದಾಶಿವ ಶೆಣೈ, ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷ ಶಿವಾನಂದ ತಗಡೂರು, ಬೆಂಗಳೂರು ಪ್ರೆಸ್‌ಕ್ಲಬ್ ಅಧ್ಯಕ್ಷ ಶ್ರೀಧರ್, ವಾರ್ತಾ ಇಲಾಖೆ ನಿವೃತ್ತ ಜಂಟಿ ನಿರ್ದೇಶಕ ಎಚ್.ಬಿ.ದಿನೇಶ್ ಇದ್ದರು.

BENGALURU ಸಂಯುಕ್ತ ಕರ್ನಾಟಕ

28 ಅಕ್ಟೋಬರ್ 2022
ಶುಕ್ರವಾರ
ಬೆಂಗಳೂರು



# ಸುದ್ದಿ ಸೃಷ್ಟಿಕರ್ತರೆಲ್ಲ ಪತ್ರಕರ್ತರಲ್ಲ




ಹಿರಿಯ ಪತ್ರಕರ್ತ ಪಿ.ರಾಮಯ್ಯ ರಚಿಸಿದ ನಾನು ಹಿಂದೂ ರಾಮಯ್ಯ ಕೃತಿಯನ್ನು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಗಾಂಧಿಭವನದಲ್ಲಿ ಗುರುವಾರ ಲೋಕಾರ್ಪಣೆಗೊಳಿಸಿದರು. ಈ ಸಂದರ್ಭದಲ್ಲಿ ಕೃತಿಕಾರ ಪಿ.ರಾಮಯ್ಯ, ವೂಡೇ ಪಿ.ಕೃಷ್ಣ, ಹಿರಿಯ ಪತ್ರಕರ್ತರಾದ ಹುಣಸವಾಡಿ ರಾಜನ್, ಶಿವಾನಂದ ತಗಡೂರು, ಸದಾಶಿವ ಶೆಣೈ, ಆರ್.ಶ್ರೀಧರ್, ಟಿ.ವೆಂಕಟೇಶ್ ಉಪಸ್ಥಿತರಿದ್ದರು.

## ನಾನು ಹಿಂದೂ ರಾಮಯ್ಯ ಕೃತಿ ಲೋಕಾರ್ಪಣೆ

ಬೆಂಗಳೂರು: ಸುದ್ದಿಸೃಷ್ಟಿಕರ್ತರೆಲ್ಲ ಬದ್ಧತೆಯ ಪತ್ರಕರ್ತರಾಗಲಾರರು. ಮೊದಲು ನಾವು ಬಡ ಪತ್ರಕರ್ತರು ಎಂದು ಕರೆಯುತ್ತಿದ್ದೆವು. ಆದರೆ, ಈಗ ಆ ಪದ ಬಳಸಲು ಆಗುವುದಿಲ್ಲ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಮಾರ್ಮಿಕವಾಗಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು.

ಗುರುವಾರ ಗಾಂಧಿಭವನದಲ್ಲಿ ಅಭಿಮಾನಿ ಪ್ರಕಾಶನ ಪ್ರಕಟಿಸಿರುವ ಹಿರಿಯ ಪತ್ರಕರ್ತ ಪಿ.ರಾಮಯ್ಯನವರ ನಾನು ಹಿಂದೂ ರಾಮಯ್ಯ ಕೃತಿಯನ್ನು ಲೋಕಾರ್ಪಣೆ ಮಾಡಿ ಅವರು ಮಾತನಾಡಿದರು. ರಾಮಯ್ಯ ಅವರ ಕೃತಿಯಲ್ಲಿ ಸಮಾಜ, ರಾಜಕೀಯ ಮತ್ತು ಜನಮಾನಸದ ಬದುಕನ್ನು ಚಿತ್ರಿಸಲಾಗಿದೆ. ಎಂತಹ ಕಠಿಣ ಪರಿಸ್ಥಿತಿ ಎದುರಾದರೂ ಅತ್ತ ಪತ್ರಿಕೋದ್ಯಮದ ಗುಣಧರ್ಮವನ್ನು ಬಿಟ್ಟುಕೊಡದೆ, ಇತ್ತ ತಮ್ಮ ವ್ಯಕ್ತಿತ್ವಕ್ಕೆ ಎಲ್ಲೂ ಧಕ್ಕೆ ತಂದುಕೊಳ್ಳದೆ ಆರು ದಶಕಗಳ ಕಾಲ ಪಿ.ರಾಮಯ್ಯನವರು ಮಾಡಿದ ಪತ್ರಿಕೋದ್ಯಮದ ಕೃಷಿ ಇಂದಿನ ಪತ್ರಕರ್ತರಿಗೆ ಆದರ್ಶ ಎಂದವರು ತಿಳಿಸಿದರು.

ಎರಡು ಪೀಳಿಗೆಯ ರಾಜಕಾರಣ ಮತ್ತು ಮೂರು ಪೀಳಿಗೆಯ ಪತ್ರಿಕೋದ್ಯಮ ನೋಡಿರುವ ರಾಮಯ್ಯನವರ ಅನೇಕ ಲೇಖನಗಳು ಇಂದಿಗೂ ಸರ್ಕಾರಕ್ಕೆ ಉಲ್ಲೇಖಗಳಾಗಿ ಉಪಯೋಗವಾಗುತ್ತಿವೆ ಎಂದು ಹೇಳಿದರು. ಸತ್ಯದ ಪ್ರತಿಪಾದನೆ ಮಾಡುತ್ತಾ ಸತ್ವಯುತ ಪತ್ರಿಕೋದ್ಯಮದತ್ತ ಇಂದಿನ ಪತ್ರಕರ್ತರು ಕಾರ್ಯನಿರ್ವಹಿಸುವ ಅವಶ್ಯಕತೆ ಹಿಂದೆಂದಿಗಿಂತಲೂ ಹೆಚ್ಚಿದೆ ಎಂದು ಸಂಯುಕ್ತ ಕರ್ನಾಟಕ ಪತ್ರಿಕೆ ಸಮೂಹ ಸಂಪಾದಕ ಹುಣಸವಾಡಿ ರಾಜನ್ ಅಭಿಪ್ರಾಯಪಟ್ಟರು. ಪಿ.ರಾಮಯ್ಯನವರ ಅಂತರಂಗ ಮತ್ತು ಬಹಿರಂಗಗಳ ದಿವ್ಯಾಗ್ನಿಗಳ ಮೂಸೆಯಲ್ಲಿ ಮೂಡಿಬಂದ ಈ ಕೃತಿ ಇಂದಿನ ಮತ್ತು ಮುಂದಿನ ಪೀಳಿಗೆಯ ಪತ್ರಕರ್ತರಿಗೆ ಕೈಗನ್ನಡಿಯಾಗಿ ಕಾರ್ಯನಿರ್ವಹಿಸುವ ಅಂಶಗಳನ್ನು ಒಳಗೊಂಡಿದೆ ಎಂದು ತಿಳಿಸಿದರು. ಕೃತಿಕಾರ ಪಿ. ರಾಮಯ್ಯ ಮಾತನಾಡಿ, ಪತ್ರಿಕೋದ್ಯಮದ ನಾವೆಯಲ್ಲಿ ಸಂಚರಿಸುತ್ತಾ ಕಾರ್ಯಾಂಗ, ನ್ಯಾಯಾಂಗ ಮತ್ತು ಶಾಸಕಾಂಗ ಕ್ಷೇತ್ರಗಳ ವರದಿ ಮಾಡುತ್ತಾ ಈ ಆರು ದಶಕಗಳಲ್ಲಿ ಸಮಾಜದ ಎಲ್ಲ ವರ್ಗಗಳ ಜನರ ಪ್ರೀತಿ ಮತ್ತು ವಿಶ್ವಾಸ ಗಳಿಸಿದ್ದೇನೆ, ಅದೇ ನನ್ನ ದೊಡ್ಡ ಆಸ್ತಿ. ತನಿಖಾ ಪತ್ರಿಕೋದ್ಯಮ ಮತ್ತು ಅಭಿವೃದ್ಧಿ ಪತ್ರಿಕೋದ್ಯಮ ಎರಡನ್ನೂ ಸೇರಿಸಿ ಈ ಪುಸ್ತಕ ಬರೆದಿದ್ದೇನೆ ಎಂದರು. ಅಧ್ಯಕ್ಷತೆ ವಹಿಸಿದ್ದ ಗಾಂಧಿ ಸ್ಮಾರಕ ನಿಧಿಯ ಡಾ.ವೂಡೇ ಪಿ.ಕೃಷ್ಣ, ರಾಮಯ್ಯನವರ ಸರಳತೆ ಮತ್ತು ಶ್ರೇಷ್ಠತೆಯ ಗುಣಗಾನ ಮಾಡಿದರು. ಮಾಧ್ಯಮ ಅಕಾಡೆಮಿಯ ಅಧ್ಯಕ್ಷ ಸದಾಶಿವ ಶೆಣೈ, ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷ ಶಿವಾನಂದ ತಗಡೂರು, ಬೆಂಗಳೂರು ಪ್ರೆಸ್‌ಕ್ಲಬ್ ಅಧ್ಯಕ್ಷ ಆರ್.ಶ್ರೀಧರ್ ಉಪಸ್ಥಿತರಿದ್ದರು. ಗಾಂಧಿ ಸ್ಮಾರಕ ನಿಧಿಯ ಕೋಶಾಧ್ಯಕ್ಷ ಎಚ್.ಬಿ ದಿನೇಶ್ ಸ್ವಾಗತಿಸಿದರು. ಅಭಿಮಾನಿ ಪ್ರಕಾಶನದ ಟಿ.ವೆಂಕಟೇಶ್ ಪ್ರಸ್ತಾವಿಕವಾಗಿ ಮಾತನಾಡಿದರು. ಸಂಧ್ಯಾಕುಮಾರಿ ಕಾರ್ಯಕ್ರಮ ನಿರೂಪಿಸಿದರು.

### ಸಕ್ಕರೆ ತಿನ್ನದೆ ಸಮಾಜಕ್ಕೆ ಸಿಹಿಯಾದ ಪತ್ರಕರ್ತ

ಪಿ.ರಾಮಯ್ಯನವರ ಆರೋಗ್ಯದ ಗುಟ್ಟನ್ನು ರಟ್ಟು ಮಾಡಿದ ಮುಖ್ಯಮಂತ್ರಿ ಬೊಮ್ಮಾಯಿ, ಪ್ರತಿದಿನ ರಾಗಿ ಮುದ್ದೆಯೇ ಇವರ ದೀರ್ಘಾಯುಷ್ಯದ ಗುಟ್ಟು ಎನ್ನುತ್ತಾ, ಸಕ್ಕರೆಯಿಂದ ಮಾರುದ್ದ ದೂರ ಇರುವುದು ಸಹ ಇವರ ಇನ್ನೊಂದು ಆರೋಗ್ಯದ ಗುಟ್ಟು ಎಂದು ತಿಳಿಸುತ್ತಾ, ಸಕ್ಕರೆ ಕಾಯಿಲೆ ಇಲ್ಲದಿದ್ದರೂ, ಸಕ್ಕರೆ ತಿನ್ನದೆ ಇಡೀ ಸಮಾಜಕ್ಕೆ ತಮ್ಮ ಪತ್ರಿಕಾ ವೃತ್ತಿಯ ಮೂಲಕ ಸಿಹಿಯನ್ನು ಉಣಬಡಿಸಿದ್ದಾರೆ ಎಂದಾಗ ಸಭೆಯಲ್ಲಿ ಶ್ಲಾಘನೆಯ ಚಪ್ಪಾಳೆ ಕೇಳಿಬಂದವು.

ಉದಯಕಾಲ

Oct 28, 2022

'ನಾನು ಹಿಂದೂ ರಾಮಯ್ಯ' ಕೃತಿ ಲೋಕಾರ್ಪಣೆಯಲ್ಲಿ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ

# ಹಿರಿಯ ಪತ್ರಕರ್ತ ಪಿ.ರಾಮಯ್ಯ ಪತ್ರಿಕಾ ರಂಗದ ಒಬ್ಬ ತಪಸ್ವಿ

ಉದಯಕಾಲ ನ್ಯೂಸ್

**ಬೆಂಗಳೂರು:** ಹಿರಿಯ ಪತ್ರಕರ್ತ ಪಿ.ರಾಮಯ್ಯ ಅವರಿಗೆ ಸತ್ಯವೇ ಚಿಂತನೆ ಮತ್ತು ಆವರ್ತವಾಗಿದೆ. ಅವರೊಬ್ಬ ಪತ್ರಿಕಾ ರಂಗದ ತಪಸ್ವಿ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ತಿಳಿಸಿದ್ದಾರೆ.

ಗಾಂಧಿಭವನದಲ್ಲಿ ಅಭಿಮಾನಿ ಪ್ರಕಾಶನ ಪ್ರಕಟಿಸಿರುವ ಹಿರಿಯ ಪತ್ರಕರ್ತ ಪಿ. ರಾಮಯ್ಯ ಅವರ ಅನುಭವ ಕಥನ ನಾನು ಹಿಂದೂ ರಾಮಯ್ಯ ಕೃತಿಯನ್ನು ಲೋಕಾರ್ಪಣೆ ಮಾಡಿ ಮಾತನಾಡಿದರು.

ರಾಮಯ್ಯ ಅವರು ಸಜ್ಜನ ಪತ್ರಕರ್ತ. ಸತ್ಯವನ್ನು ಪ್ರಿಯವಾಗಿ ಹೇಳಿದ್ದಾರೆ. ಅವರ ಮನಸ್ಸಿನಲ್ಲಿ ಇನ್ನೂ ಸಾಕಷ್ಟು ಮಾಹಿತಿ ಇದೆ. ಆದರೆ ಅವನ್ನು ಅವರು ಹೇಳಿಲ್ಲ, ಅದು ಅವರ ಸೌಜನ್ಯ. ರಾಜ್ಯದಲ್ಲಿ ನಡೆದ ಹಲವು ಘಟನೆಗಳಿಗೆ ಅವರು ಸಾಕ್ಷಿಯಾಗಿದ್ದಾರೆ. ಎರಡು ಪೀಳಿಗೆಯ ರಾಜಕಾರಣಿಗಳು ಹಾಗೂ ಮೂರು ಪೀಳಿಗೆಯ ಪತ್ರಕರ್ತರನ್ನು ನೋಡಿದ್ದಾರೆ. ಅವರು ಇದನ್ನು ರೋಚಕವಾಗಿ ಬರೆದು ಅವರು ಪ್ರಸಿದ್ಧಿಗೆ ಭಾಜನರಾಗಬಹುದಿತ್ತು. ಆದರೆ, ವಾಸ್ತವತೆಯನ್ನು ಮಾತ್ರ ಪುಸ್ತಕದಲ್ಲಿ ಬರೆದಿದ್ದಾರೆ ಅವರೊಬ್ಬ ಪ್ರಮಾಣಿಕ ಪತ್ರಕರ್ತ.ಅವರ ಲೇಖನಗಳಲ್ಲಿ ಸತ್ಯ ಬರೆದಾಗ ಕೆಲವರಿಗೆ ನೋವಾಗಿರಬಹುದು. ಕೆಲವರು ಸಕಾರಾತ್ಮಕವಾಗಿ ಟೀಕೆ ಮಾಡಿ ಬರೆದಾಗ ಅದನ್ನು ಎಲ್ಲರೂ ಸ್ವೀಕರಿಸುತ್ತಾರೆ ಎಂದರು.



ಕೆಲವು ಜನರ ಚಿಂತನೆ ಮತ್ತು ವ್ಯಕ್ತಿತ್ವ ಬದಲಾಗುತ್ತವೆ. ರಾಮಯ್ಯ ಅವರ ವ್ಯಕ್ತಿತ್ವ ಬದಲಾಗಿಲ್ಲ, ಎಲ್ಲ ಮುಖ್ಯಮಂತ್ರಿಗಳ ಜೊತೆ ಆತ್ಮೀಯರು.ಮೊದಲು ನಾವು ಬಡ ಪತ್ರಕರ್ತರು ಅಂತ ಕರೆಯುತ್ತಿದ್ದೆವು. ಆದರೆ ಈಗ ಆ ಪದ ಬಳಕೆ ಮಾಡುವುದಿಲ್ಲ, ಈಗ ಕಾಲ ಬದಲಾಗಿದೆ ಎಂದರು

**ಶುದ್ಧ ಹಸ್ತ ಪತ್ರಕರ್ತರು:** ರಾಮಯ್ಯ ಅವರು ಶುದ್ಧ ಹಸ್ತ ಪತ್ರಕರ್ತರು. ರಾಮಯ್ಯ ಅವರ ಮುಗ್ಧತೆ ಈಗಲೂ ಬದಲಾಗಿಲ್ಲ, ಆತ್ಮಶಕ್ತಿಯಿಂದ ಕೆಲಸ ಮಾಡಿದ್ದಾರೆ.ಅವರಿಗೆ ಸಾಕಷ್ಟು ಸವಾಲು ಎದುರಾಗಿರಬಹುದು. ಅವರ ವಾಸ್ತವತೆಯನ್ನು ಬರೆಯುವುದರಲ್ಲಿ ಎಂದೂ ರಾಜಿಯಾಗಿಲ್ಲ ಎಂದು ತಿಳಿಸಿದರು. ಒಬ್ಬ ಪತ್ರಕರ್ತನಿಗೆ ಹಲವಾರು ಜವಾಬ್ದಾರಿಗಳಿರುತ್ತವೆ ಎಂಬುದನ್ನು ರಾಮಯ್ಯ ಅವರ ಬರಹದಿಂದ ತಿಳಿಯಬಹುದು. ಬರಹದ ಇತಿಮಿತಿ ಹಾಗೂ ಪರಿಣಾಮಗಳ ಬಗ್ಗೆ ಯೋಚಿಸುವುದು ಬಹಳ ಮುಖ್ಯ.ಪತ್ರಕರ್ತನ ಬರಹದಲ್ಲಿ ವಿಚಾರಾತ್ಮಕ ಹಾಗೂ ಸಂಯಮದ ಚಿಂತನೆ ಇರಬೇಕಾಗುತ್ತದೆ ಎಂದರು.

**ರಾಮಯ್ಯ ಮತ್ತು ಹಿಂದೂ ಪತ್ರಿಕೆಗೆ ಅವಿನಾಭಾವ ಸಂಬಂಧ:** ರಾಮಯ್ಯ ಅವರಿಗೂ ಹಿಂದೂ ಪತ್ರಿಕೆಗೂ ಅವಿನಾಭಾವ ಸಂಬಂಧ ಇದೆ. ಹಿಂದೂ ಪತ್ರಿಕೆ ತನ್ನ ಮೌಲ್ಯಗಳಿಂದ, ಸ್ವಾತಂತ್ರ್ಯ ಪೂರ್ವ ಹಾಗೂ ನಂತರದಲ್ಲಿ, ಭಾರತದ ಪ್ರಜಾಪ್ರಭುತ್ವದಲ್ಲಿ ಮಹತ್ವದ ಪಾತ್ರ ವಹಿಸಿದೆ. ರಾಮಯ್ಯ ಅವರು [illegible]. ಇಂತಹ ಕ್ಷೇತ್ರದ ಬಗ್ಗೆ ಬರೆದಿರುವ ಅನೇಕ ಲೇಖನಗಳು ಬಹಳ ಇವೆ. ಅವು ಈಗಲೂ ನಮಗೆ ಮಾಹಿತಿಗೆ ದಾಖಲೆಗಳಾಗಿವೆ ಎಂದರು.

**ರಾಮಯ್ಯ ಅವರು ಕರ್ನಾಟಕದ ಆಸ್ತಿ:** ರಾಮಯ್ಯ ಅವರು ನಮ್ಮ ಕರ್ನಾಟಕದ ಆಸ್ತಿ, ಅವರ ಬರಹದಿಂದ ಸಾಕಷ್ಟು ಕಲಿಯುವುದಿದೆ. ರಾಮಯ್ಯನವರು ಸಮಾಜಮುಖಿಯಾಗಿ ಕೆಲಸ ಮಾಡಿದ್ದಾರೆ. ಈ ಪುಸ್ತಕ ಸಮಕಾಲೀನ ರಾಜಕಾರಣ ಮತ್ತು ಜನರ ಬದುಕು, ಸಮಾಜದ ಪರಿಸ್ಥಿತಿಯನ್ನು ಬಿಂಬಿಸುತ್ತಿದೆ.'ನಾನು ಹಿಂದೂ ರಾಮಯ್ಯ' ಪುಸ್ತಕದಿಂದ ಯುವಕರಿಗೆ ಪ್ರೇರಣೆ ದೊರೆಯಲಿದೆ. ಅವರ ಮಾರ್ಗದರ್ಶನ ರಾಜಕಾರಣಿಗಳು, ಪತ್ರಕರ್ತರಿಗೆ ಮಾರ್ಗದರ್ಶನ ನೀಡಲಿ ಎಂದರು.

ಸಮಾರಂಭದಲ್ಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ, ಕೃತಿಯ ಲೇಖಕ ಪಿ. ರಾಮಯ್ಯ, ಅಭಿಮಾನಿ ಪ್ರಕಾಶನದ ಟಿ. ವೆಂಕಟೇಶ್, ಹಿರಿಯ ಪತ್ರಕರ್ತ ಹುಣಸವಾಡಿ ರಾಜನ್, ಮಾಧ್ಯಮ ಅಕಾಡೆಮಿ ಅಧ್ಯಕ್ಷ ಸದಾಶಿವ ಶೆಣೈ, ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷ ಶಿವಾನಂದ ತಗಡೂರು, ಬೆಂಗಳೂರು ಪ್ರೆಸ್ ಕ್ಲಬ್ ಅಧ್ಯಕ್ಷ ಶ್ರೀಧರ್, ವಾರ್ತಾ ಇಲಾಖೆ ನಿವೃತ್ತ ಜಂಟಿ ನಿರ್ದೇಶಕ ಹೆಚ್.ಬಿ. ದಿನೇಶ್ ಹಾಜರಿದ್ದರು.

ಈ ಸಂಜೆ

Oct 27, 2022



ಅಭಿಮಾನಿ ಪ್ರಕಾಶನ - ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ಗಾಂಧಿಭವನದಲ್ಲಿಂದು ಹಮ್ಮಿಕೊಂಡಿದ್ದ ಹಿರಿಯ ಪತ್ರಕರ್ತರಾದ ಪಿ.ರಾಮಯ್ಯ ಅವರ 'ನಾನು ಹಿಂದೂ ರಾಮಯ್ಯ' ಕೃತಿಯನ್ನು ಸಿಎಂ ಬಸವರಾಜ ಬೊಮ್ಮಾಯಿ ಲೋಕಾರ್ಪಣೆ ಮಾಡಿದರು. ಗಾಂಧಿಭವನದ ಅಧ್ಯಕ್ಷ ಡಾ. ವೂಡೇ.ಪಿ. ಕೃಷ್ಣ, ಕರ್ನಾಟಕ ಮಾಧ್ಯಮ ಅಕಾಡೆಮಿ ಅಧ್ಯಕ್ಷ ಸದಾಶಿವ ಶೆಣೈ, ಬೆಂಗಳೂರು ಪ್ರೆಸ್‌ಕ್ಲಬ್ ಅಧ್ಯಕ್ಷ ಆರ್. ಶ್ರೀಧರ್, ಕರ್ನಾಟಕ ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷ ಶಿವಾನಂದ ತಗಡೂರು, ಅಭಿಮಾನಿ ಸಮೂಹ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಟಿ. ವೆಂಕಟೇಶ್, ಕಾರ್ಯಕಾರಿ ನಿರ್ದೇಶಕರಾದ ವಿ.ಶ್ರೀನಿವಾಸ್, ಎ.ದಿವಾಕರ್, ಎ.ಪುರುಷೋತ್ತಮ್, ರವಿ, ಮಣಸಾಡಿ ರಾಜನ್, ಗಾಂಧಿಭವನ ಕೋಶಾಧ್ಯಕ್ಷ ದಿನೇಶ್ ಮತ್ತಿತರರು ಪಾಲ್ಗೊಂಡಿದ್ದರು. ಇದೇ ಸಂದರ್ಭದಲ್ಲಿ ರಾಮಯ್ಯ ದಂಪತಿಯನ್ನು ಸನ್ಮಾನಿಸಲಾಯಿತು.

ಸಂಜೆವಾಣಿ

ಗುರುವಾರ 27 ಅಕ್ಟೋಬರ್ 2022



ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ಇಂದು ಗಾಂಧಿಭವನದಲ್ಲಿ ಅಭಿಮಾನಿ ಪ್ರಕಾಶನ ಪ್ರಕಟಿಸಿರುವ ಹಿರಿಯ ಪತ್ರಕರ್ತ ಪಿ. ರಾಮಯ್ಯ ಅವರ ಅನುಭವ ಕಥನ "ನಾನು ಹಿಂದೂ ರಾಮಯ್ಯ" ಕೃತಿಯನ್ನು ಲೋಕಾರ್ಪಣೆ ಮಾಡಿದರು. ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ, ಕೃತಿಯ ಲೇಖಕ ಪಿ. ರಾಮಯ್ಯ, ಅಭಿಮಾನಿ ಪ್ರಕಾಶನದ ಟಿ. ವೆಂಕಟೇಶ್, ಹಿರಿಯ ಪತ್ರಕರ್ತ ಹುಣಸವಾಡಿ ರಾಜನ್, ಮಾಧ್ಯಮ ಅಕಾಡೆಮಿ ಅಧ್ಯಕ್ಷ ಸದಾಶಿವ ಶೆಣೈ, ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷ ಶಿವಾನಂದ ತಗಡೂರು, ಬೆಂಗಳೂರು ಪ್ರೆಸ್ ಕ್ಲಬ್ ಅಧ್ಯಕ್ಷ ಶ್ರೀಧರ್, ವಾರ್ತಾ ಇಲಾಖೆ ನಿವೃತ್ತ ಜಂಟಿ ನಿರ್ದೇಶಕ ಹೆಚ್.ಬಿ. ದಿನೇಶ್, ಮತ್ತು ಇತರ ಗಣ್ಯರು ಉಪಸ್ಥಿತರಿದ್ದರು.

ಸಂಜೆವಾಣಿ
ಬೆಂಗಳೂರು | Sanjevani, Bangalore
ಗುರುವಾರ 27 ಅಕ್ಟೋಬರ್ 2022 | Thursday 27 October 2022



ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ಇಂದು ಗಾಂಧಿಭವನದಲ್ಲಿ ಅಭಿಮಾನಿ ಪ್ರಕಾಶನ ಪ್ರಕಟಿಸಿರುವ ಹಿರಿಯ ಪತ್ರಕರ್ತ ಪಿ. ರಾಮಯ್ಯ ಅವರ ಅನುಭವ ಕಥನ "ನಾನು ಹಿಂದೂ ರಾಮಯ್ಯ" ಕೃತಿಯನ್ನು ಲೋಕಾರ್ಪಣೆ ಮಾಡಿದರು. ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ, ಕೃತಿಯ ಲೇಖಕ ಪಿ. ರಾಮಯ್ಯ, ಅಭಿಮಾನಿ ಪ್ರಕಾಶನದ ಟಿ. ವೆಂಕಟೇಶ್, ಹಿರಿಯ ಪತ್ರಕರ್ತ ಹುಣಸವಾಡಿ ರಾಜನ್, ಮಾಧ್ಯಮ ಅಕಾಡೆಮಿ ಅಧ್ಯಕ್ಷ ಸದಾಶಿವ ಶೆಣೈ, ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷ ಶಿವಾನಂದ ತಗಡೂರು, ಬೆಂಗಳೂರು ಪ್ರೆಸ್ ಕ್ಲಬ್ ಅಧ್ಯಕ್ಷ ಶ್ರೀಧರ್, ವಾರ್ತಾ ಇಲಾಖೆ ನಿವೃತ್ತ ಜಂಟಿ ನಿರ್ದೇಶಕ ಹೆಚ್.ಬಿ. ದಿನೇಶ್, ಮತ್ತು ಇತರ ಗಣ್ಯರು ಉಪಸ್ಥಿತರಿದ್ದರು.

ಸಂಜೆವಾಣಿ
Sanjevani, Bangalore | ಬೆಂಗಳೂರು | ಮಂಗಳವಾರ 11 ಅಕ್ಟೋಬರ್ 2022 7



ರಾಷ್ಟ್ರಪತಿಗಳ ಚಿನ್ನದ ಪದಕ ವಿಜೇತ ನಾಡೋಜ ಡಾ. ವೂಡೆ ಪಿ. ಕೃಷ್ಣ ಅವರಿಗೆ ಡಾ. ಮೋದಿ ಸ್ಮಾರಕ ಮಾನವೀಯ ಪ್ರಶಸ್ತಿಯನ್ನು ಲಯನ್ಸ್ ಇಂಟರ್ ನ್ಯಾಷನಲ್ ಡಿಸ್ಟಿಕ್ 317 ಎ ವತಿಯಿಂದ ನೀಡಿ ಗೌರವಿಸಲಾಯಿತು.

ಉದಯವಾಣಿ ಬೆಂಗಳೂರು



ನಗರದಲ್ಲಿ ಲಯನ್ಸ್ ಇಂಟರ್ ನ್ಯಾಷನಲ್ ಡಿಸ್ಟ್ರಿಕ್ಟ್ 317ಎ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಶೇಷಾದ್ರಿಪುರ ಶಿಕ್ಷಣ ಸಂಸ್ಥೆಗಳ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ ಅವರಿಗೆ 'ಡಾ.ಎಂ.ಸಿ.ಮೋದಿ ಸ್ಮಾರಕ ಮಾನವೀಯ ಪ್ರಶಸ್ತಿ' ನೀಡಲಾಯಿತು. ಈ ವೇಳೆ ಮಂಜುನಾಥ್, ಶೋಭಾ ಹಂಜಿ, ಡಾ. ಶಶಿಧರ್ ಗಂಜಿಗಟ್ಟಿ, ಡಾ. ಮಹೇಶ್ ಕುಕ್ರೇಜ ಹಾಗೂ ಪ್ರಕಾಶ್ ಎಫ್. ಮದ್ವಾನಿ ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.



## ಪ್ರಶಸ್ತಿ ಪ್ರದಾನ

ಲಯನ್ಸ್ ಇಂಟರ್‌ನ್ಯಾಷನಲ್ ಡಿಸ್ಟ್ರಿಕ್ಟ್ 317ಎ ನಗರದಲ್ಲಿ ಆಯೋಜಿಸಿದ ಕಾರ್ಯಕ್ರಮದಲ್ಲಿ ಶೇಷಾದ್ರಿಪುರ ಶಿಕ್ಷಣ ಸಂಸ್ಥೆಗಳ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಅವರಿಗೆ 'ಡಾ.ಎಂ.ಸಿ. ಮೋದಿ ಸ್ಮಾರಕ ಮಾನವೀಯ ಪ್ರಶಸ್ತಿ'ಯನ್ನು ಪ್ರದಾನ ಮಾಡಲಾಯಿತು. ಜೆ. ಮಂಜುನಾಥ್, ಶೋಭಾ ಹಂಜಿ, ಡಾ. ಶಶಿಧರ್ ಗಂಜಿಗಟ್ಟಿ, ಡಾ. ಮಹೇಶ್ ಕುಕ್ರೇಜ, ಪ್ರಕಾಶ್ ಎಫ್. ಮದ್ವಾನಿ ಇದ್ದರು

ಸಂಯುಕ್ತ ಕರ್ನಾಟಕ 09 ಅಕ್ಟೋಬರ್ 2022 ಭಾನುವಾರ



ಲಯನ್ಸ್ ಇಂಟರ್ ನ್ಯಾಷನಲ್, ಲಯನ್ಸ್ ಕ್ಲಬ್ ಆಫ್ ಬೆಂಗಳೂರು ಸಂಯುಕ್ತಾಶ್ರಯದಲ್ಲಿ ಶಿಕ್ಷಣ ತಜ್ಞ ವುಡೇ ಪಿ.ಕೃಷ್ಣ ಅವರಿಗೆ ಡಾ.ಎಂ.ಸಿ. ಮೋದಿ ಸ್ಮಾರಕ ಮಾನವೀಯ ಪ್ರಶಸ್ತಿಯನ್ನು ಪ್ರದಾನ ಮಾಡಲಾಯಿತು.

ವಿಜಯ ಕರ್ನಾಟಕ
ಭಾನುವಾರ,9 ಅಕ್ಟೋಬರ್ 2022



ಲಯನ್ಸ್ ಇಂಟರ್‌ನ್ಯಾಷನಲ್ ಡಿಸ್ಟ್ರಿಕ್ಟ್ 317 ವತಿಯಿಂದ ಡಾ.ಎಂ.ಸಿ. ಮೋದಿ ಸ್ಮಾರಕ ಮಾನವೀಯ ಪ್ರಶಸ್ತಿಯನ್ನು ಡಾ.ವೂಡೆ ಪಿ. ಕೃಷ್ಣಅವರಿಗೆ ನೀಡಿ ಗೌರವಿಸಲಾಯಿತು.

ಹೊಸ ದಿಗಂತ
ಭಾನುವಾರ, 9 ಅಕ್ಟೋಬರ್ 2022, ಬೆಂಗಳೂರು



ರಾಷ್ಟ್ರಪತಿ ಚಿನ್ನದ ಪದಕ ವಿಜೇತ ಡಾ.ವೂಡೇ ಪಿ.ಕೃಷ್ಣರವರಿಗೆ ಲಯನ್ ಇಂಟರ್ ನ್ಯಾಷನಲ್ ಡಿಸ್ಟ್ರಿಕ್ 307 ವತಿಯಿಂದ ಡಾ.ಎಂ.ಸಿ ಮೋದಿ ಸ್ಮಾರಕ ಮಾನವೀಯ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಮಂಜುನಾಥ್, ಶೋಭಾ ಹಂಚಿ, ಡಾ.ಶಶಿಧರ್ ಗಂಜಿಗಟ್ಟಿ ಇದ್ದರು.

ಪ್ರಜಾವಾಣಿ | ಶನಿವಾರ ○ ಅಕ್ಟೋಬರ್ 8, 2022



ದೊಡ್ಡಬಳ್ಳಾಪುರದ ತೂಬಗೆರೆ ಗ್ರಾಮದಲ್ಲಿ ಯಲಹಂಕದ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನ ರಾಷ್ಟ್ರೀಯ ಸೇವಾ ಘಟಕದಿಂದ ನಡೆಯುತ್ತಿರುವ ಶಿಬಿರದಲ್ಲಿ ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಮಾತನಾಡಿದರು

# ಎನ್‌ಎಸ್‌ಎಸ್ ಶಿಬಿರ

ತೂಬಗೆರೆ (ದೊಡ್ಡಬಳ್ಳಾಪುರ): ಎನ್‌ಎಸ್‌ಎಸ್ ಶಿಬಿರಾರ್ಥಿಗಳು ಎಲ್ಲರ ಜತೆಯಲ್ಲಿ ಸಹಬಾಳ್ವೆ ಮಾಡುವುದನ್ನು ಕಲಿಯಬೇಕು. ಮಹಾತ್ಮ ಗಾಂಧೀಜಿಯವರ ಆದರ್ಶಗಳಂತೆ ಸಾಧ್ಯವಾದಷ್ಟೂ ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳುವುದನ್ನು ರೂಢಿಸಿಕೊಳ್ಳಬೇಕು ಎಂದು ಯಲಹಂಕದ ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಹೇಳಿದರು.

ತಾಲ್ಲೂಕಿನ ತೂಬಗೆರೆ ಗ್ರಾಮದಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆ ಸಹಯೋಗದೊಂದಿಗೆ ಯಲಹಂಕದ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನ ರಾಷ್ಟ್ರೀಯ ಸೇವಾ ಘಟಕದಿಂದ ನಡೆಯುತ್ತಿರುವ ಏಳು ದಿನಗಳ ವಾರ್ಷಿಕ ವಿಶೇಷ ಶಿಬಿರ ಉದ್ಘಾಟಿಸಿ ಮಾತನಾಡಿದರು.

ನಮ್ಮ ಸ್ವಂತ ಕೆಲಸಗಳನ್ನು ಪರರ ಮೂಲಕ ಮಾಡಿಸುವುದು ಪ್ರಾರಂಭವಾಗುತ್ತಿದಂತೆ ಶೋಷಣೆಯ ಪ್ರಾರಂಭವಾಗಲಿದೆ. ನಾವು ಸ್ವಾವಲಂಬಿಗಳಾಗಬೇಕು. ಸರಳ ಜೀವನ ನಡೆಸಬೇಕು ಇದೇ ಮಹಾತ್ಮ ಗಾಂಧೀಜಿಯವರ ಆದರ್ಶ ಎಂದರು.

ಯುವ ಮುಖಂಡ ಉದಯ ಆರಾಧ್ಯ ಮಾತನಾಡಿ, ಯುವಜನರನ್ನು ಸೇವಾ ಮನೋಭಾವದೊಂದಿಗೆ ರಾಷ್ಟ್ರ ನಿರ್ಮಾಣದ ಕೆಲಸಕ್ಕೆ ಸಜ್ಜುಗೊಳಿಸುವುದು ಯೋಜನೆಯ ಪ್ರಮುಖ ಉದ್ದೇಶ ಎಂದರು.

ಗ್ರಾಮ ಪಂಚಾಯಿತಿ ಅಧ್ಯಕ್ಷ ಸುರೇಶ್‌ಬಾಬು ರಾಷ್ಟ್ರೀಯ ಸೇವಾ ಘಟಕದ ಧ್ವಜಾರೋಹಣ ನೆರವೇರಿಸಿದರು.

ತೂಬಗೆರೆ ಸರ್ಕಾರಿ ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕ ನಾಗರಾಜ್, ಗ್ರಾಮ ಪಂಚಾಯಿತಿ ಮಾಜಿ ಅಧ್ಯಕ್ಷ ವೆಂಕಟೇಶ್, ಶೇಷಾದ್ರಿಪುರಂ ಕಾಲೇಜಿನ ಮಾರ್ಗದರ್ಶನ ಸಮಿತಿ ಅಧ್ಯಕ್ಷ ಬಿ.ಸಿ ಲೋಕನಾಥ್, ವೀರಭದ್ರಯ್ಯ, ಪ್ರೊ ಟಿ.ದೊಡ್ಡೇಗೌಡ, ನಟರಾಜ್ ಇದ್ದರು.

ನಂ.1 ವಿಜಯವಾಣಿ
ಬೆಂ. ಗ್ರಾಮಾಂತರ
ಶನಿವಾರ 8 ಅಕ್ಟೋಬರ್ 2022
8 OCTOBER 2022

# ಸಹಬಾಳ್ವೆಯಿಂದ ಬದುಕುವುದನ್ನು ಕಲಿಯೋಣ

## ನಾಡೋಜ ಡಾ. ವೂಡೇ ಪಿ. ಕೃಷ್ಣ ಕರೆ | ಎನ್ನೆಸ್ಸೆಸ್ ಶಿಬಿರಕ್ಕೆ ಚಾಲನೆ



ತೂಬಗೆರೆಯಲ್ಲಿ ಯಲಹಂಕದ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜು ರಾಷ್ಟ್ರೀಯ ಸೇವಾ ಘಟಕ ಆಯೋಜಿಸಿದ್ದ ವಿಶೇಷ ಶಿಬಿರವನ್ನು ಗ್ರಾಪಂ ಅಧ್ಯಕ್ಷ ಸುರೇಶ್ ಬಾಬು ಧ್ವಜಾರೋಹಣ ನೆರವೇರಿಸುವ ಮೂಲಕ ಉದ್ಘಾಟಿಸಿದರು. ನಾಡೋಜ ಡಾ. ವೂಡೇ ಪಿ. ಕೃಷ್ಣ, ಸರ್ಕಾರಿ ಪ್ರಾಥಮಿಕ ಶಾಲೆಯ ಮುಖ್ಯಶಿಕ್ಷಕ ನಾಗರಾಜ್, ಗ್ರಾಪಂ ಮಾಜಿ ಅಧ್ಯಕ್ಷ ವೆಂಕಟೇಶ್ ಇತರರು ಇದ್ದರು.

■ ವಿಜಯವಾಣಿ ಸುದ್ದಿಜಾಲ ತೂಬಗೆರೆ

ನಾವು ಸ್ವಾವಲಂಬಿಗಳಾಗಿ ಸರಳ ಜೀವನ ನಡೆಸಬೇಕು. ಇದು ಮಹಾತ್ಮ ಗಾಂಧಿ ಅವರ ಆಶಯವೂ ಆಗಿದೆ ಎಂದು ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ. ಕೃಷ್ಣ ತಿಳಿಸಿದರು. ಪಟ್ಟಣದಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆ ಸಹಯೋಗದೊಂದಿಗೆ ಯಲಹಂಕದ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜು, ರಾಷ್ಟ್ರೀಯ ಸೇವಾ ಘಟಕದಿಂದ ಹಮ್ಮಿಕೊಂಡಿದ್ದ ವಿಶೇಷ ಶಿಬಿರವನ್ನು ಶುಕ್ರವಾರ ಉದ್ಘಾಟಿಸಿ ಮಾತನಾಡಿದರು. ಎಲ್ಲರ ಜತೆಯಲ್ಲಿ ಸಹಬಾಳ್ವೆಯಿಂದ ಬದುಕುವುದನ್ನು ಕಲಿಯಬೇಕು. ನಮ್ಮ ಕೆಲಸವನ್ನು ನಾವೇ ಮಾಡಿಕೊಳ್ಳಬೇಕು. ಸ್ವಂತ ಕೆಲಸಗಳನ್ನು ಪರರ ಮೂಲಕ ಮಾಡಿಸುವುದು ಪ್ರಾರಂಭವಾಗುತ್ತದೆಯೋ ಅದೇ ಶೋಷಣೆಯ ಮೂಲವಾಗಲಿದೆ ಎಂದರು. ಯುವ ಮುಖಂಡ ಉದಯ ಆರಾಧ್ಯ ಮಾತನಾಡಿ, ಯುವಜನರನ್ನು ಸೇವಾ ಮನೋಭಾವದೊಂದಿಗೆ ರಾಷ್ಟ್ರ ನಿರ್ಮಾಣದ ಕೆಲಸಕ್ಕೆ ಸಜ್ಜುಗೊಳಿಸುವುದು ಯೋಜನೆ ಉದ್ದೇಶ ಎಂದರು. ಶೇಷಾದ್ರಿಪುರಂ ಕಾಲೇಜಿನ ಮಾರ್ಗದರ್ಶನ ಸಮಿತಿ ಅಧ್ಯಕ್ಷ ಬಿ.ಸಿ. ಲೋಕನಾಥ್, ಧರ್ಮದರ್ಶಿ ವೀರಭದ್ರಯ್ಯ, ಪ್ರಾಂಶುಪಾಲ ಪ್ರೊ.ಟಿ. ದೊಡ್ಡೇಗೌಡ, ಶಿಬಿರಾಧಿಕಾರಿ ನಟರಾಜ್ ಇದ್ದರು.

ವಿಜಯ ಕರ್ನಾಟಕ
ಮಂಗಳವಾರ, 4 ಅಕ್ಟೋಬರ್ 2022



# ವೂಡೆ ಪಿ. ಕೃಷ್ಣಗೆ ಪ್ರಶಸ್ತಿ

**ಬೆಂಗಳೂರು:** ಲಯನ್ಸ್ ಇಂಟರ್ ನ್ಯಾಷನಲ್ ಡಿ.317ಎ ನಿಂದ ನೀಡಲಾಗುವ ಡಾ.ಎಂ.ಸಿ. ಮೋದಿ ಸ್ಮಾರಕ ಮಾನವೀಯ ಪ್ರಶಸ್ತಿಗೆ ನಾಡೋಜ ವೂಡೆ ಪಿ. ಕೃಷ್ಣ ಭಾಜನರಾಗಿದ್ದಾರೆ.

## ಗ್ರಾಮಗಳ ಅಭಿವೃದ್ಧಿಯಲ್ಲಿ ಮುಂದಿರುವ ಕರ್ನಾಟಕ ರಾಜ್ಯ। ಸಿಎಂ ಬೊಮ್ಮಾಯಿ ಹೇಳಿಕೆ

# ಏಳು ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಾಣ

■ ವಿಕ ಸುದ್ದಿಲೋಕ ಬೆಂಗಳೂರು

ರಾಜ್ಯದ ಏಳು ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಾಣ ಬಾಕಿಯಿದ್ದು, ಶೀಘ್ರವೇ ಭವನ ನಿರ್ಮಾಣಕ್ಕೆ ಕ್ರಮ ಕೈಗೊಳ್ಳಲಾಗುವುದು ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹೇಳಿದರು.

ಗಾಂಧಿ ಸ್ಮಾರಕ ನಿಧಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಸಹಯೋಗದೊಂದಿಗೆ ಗಾಂಧಿ ಜಯಂತಿ ಅಂಗವಾಗಿ ಬೆಂಗಳೂರಿನ ಗಾಂಧಿ ಭವನದಲ್ಲಿ ಭಾನುವಾರ ನಡೆದ ಸಮಾರಂಭದಲ್ಲಿ ಮನೋರೋಗ ತಜ್ಞರಾದ ಡಾ.ಸಿ.ಆರ್. ಚಂದ್ರಶೇಖರ್ ಅವರಿಗೆ ಪ್ರಸಕ್ತ ಸಾಲಿನ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ಪ್ರದಾನ ಮಾಡಿ ಮಾತನಾಡಿದರು.

''23 ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಿಸಲಾಗಿದೆ. ಜಾಗದ ಸಮಸ್ಯೆ ಕಾರಣಕ್ಕೆ ಕೆಲವು ಜಿಲ್ಲೆಗಳಲ್ಲಿ ಭವನ ನಿರ್ಮಾಣ ಕಾರ್ಯವು ನನೆಗುದಿಗೆ ಬಿದ್ದಿದೆ. ಈ ಸಮಸ್ಯೆ ಬಗೆಹರಿಸಲಾಗುವುದು,'' ಎಂದು ತಿಳಿಸಿದರು.

''ಗ್ರಾಮಗಳ ಅಭಿವೃದ್ಧಿ ಬಹಳ ಮುಖ್ಯವಾಗಿದ್ದು, ಕರ್ನಾಟಕ ಈ ವಿಷಯದಲ್ಲಿ ಬಹಳ ಮುಂದಿದೆ. ಹಳ್ಳಿಗಳಲ್ಲಿ ಕೂಡ ಡಿಜಿಟಲ್ ಕ್ರಾಂತಿಯಿಂದ ಬಹಳಷ್ಟು ಅನುಕೂಲಗಳಾಗುತ್ತಿವೆ. ತಂತ್ರಜ್ಞಾನ ಕ್ರಾಂತಿಯಿಂದ ಹಳ್ಳಿಗಳಲ್ಲಿ ಸರಕಾರದ ಅನೇಕ ಸೇವೆಗಳನ್ನು ಒದಗಿಸುತ್ತಿದ್ದು, ಇನ್ನಷ್ಟು ಸೇವೆಗಳನ್ನು ಒದಗಿಸಲು ಕ್ರಮ ವಹಿಸಲಾಗುವುದು,'' ಎಂದು ಸಿಎಂ ಹೇಳಿದರು.

ಮಾಜಿ ಸಚಿವ ಎಚ್.ಕೆ. ಪಾಟೀಲ್ ಮಾತನಾಡಿ, ''ಗಾಂಧೀಜಿ ಅವರದ್ದು ಚರ್ಚಿಸುವ ವ್ಯಕ್ತಿತ್ವ ಅಲ್ಲ; ಧ್ಯಾನಿಸುವ ವ್ಯಕ್ತಿತ್ವ. ಗ್ರಾಮೀಣಾಭಿವೃದ್ಧಿಯಿಂದ ರಾಷ್ಟ್ರ ಕಲ್ಯಾಣ ಸಾಧ್ಯ ಎಂದು ಗಾಂಧೀಜಿ ಪ್ರತಿಪಾದಿಸಿದ್ದರು. ರಾಜ್ಯದಲ್ಲಿ ಗ್ರಾಮ ಸ್ವರಾಜ್ ಹಾಗೂ ಪಂಚಾಯತ್ ರಾಜ್ ಕಾಯಿದೆ ಸಮರ್ಪಕವಾಗಿ ಅನುಷ್ಠಾನಕ್ಕೆ ತರಬೇಕು,'' ಎಂದು ಕೋರಿದರು.

ಪ್ರಶಸ್ತಿ ಸ್ವೀಕರಿಸಿದ ಡಾ. ಸಿ.ಆರ್. ಚಂದ್ರಶೇಖರ್ ಮಾತನಾಡಿ, ''ಮಾನಸಿಕ ಕ್ಷೇತ್ರವು ಅತ್ಯಂತ ನಿರ್ಲಕ್ಷ್ಯಕ್ಕೆ ಒಳಗಾಗಿದೆ. ಮಾನಸಿಕ ಒತ್ತಡದಿಂದ ಅನೇಕ ಕಾಯಿಲೆಗಳಿಗೆ ತುತ್ತಾಗುತ್ತಿದ್ದೇವೆ. ಶಾಲಾ, ಕಾಲೇಜು ಹಂತದಲ್ಲಿ ಮನಸ್ಸಿನ ಆರೋಗ್ಯದ ಪಠ್ಯ ಅಳವಡಿಸಬೇಕು. ಈ ಮೂಲಕ ಮಕ್ಕಳಿಗೆ ಮಾನಸಿಕ ಕೌನ್ಸೆಲಿಂಗ್ ಅಗತ್ಯವಿದೆ'' ಎಂದರು.

ಕಾರ್ಯಕ್ರಮದಲ್ಲಿ ಸಚಿವರಾದ ಗೋವಿಂದ ಕಾರಜೋಳ, ಆರಗ ಜ್ಞಾನೇಂದ್ರ, ಎಂ.ಟಿ.ಬಿ. ನಾಗರಾಜ್, 'ವಿಜಯ ಕರ್ನಾಟಕ' ಸಂಪಾದಕ ಸುದರ್ಶನ ಚನ್ನಂಗಿಹಳ್ಳಿ, ಹೈಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ ಎ.ವಿ. ಚಂದ್ರಶೇಖರ್, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಆಯುಕ್ತ ಡಾ.ಪಿ.ಎಸ್.ಹರ್ಷ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಶಾಸಕ ರಾಜೀವ್, ರಾಜ್ಯಸಭಾ ಸದಸ್ಯ ಎಲ್. ಹನುಮಂತಯ್ಯ ಪಾಲ್ಗೊಂಡಿದ್ದರು.

ಗಾಂಧಿ ಅನುಯಾಯಿ ಕಡಿದಾಳ್ ಮಂಜಪ್ಪ ಹುತಾತ್ಮ ಮೈಲಾರ ಮಹಾದೇವ, ವಿದ್ಯಾರ್ಥಿಗಳು, ಕವನಗಳಲ್ಲಿ ಮೂಡಿದ ಗಾಂಧಿ ಎಂಬ ಕೃತಿ ಬಿಡುಗಡೆ ಮಾಡಲಾಯಿತು. ಲೇಖಕಿ ಡಾ. ಕೆ.ಆರ್. ಸಂಧ್ಯಾರೆಡ್ಡಿ ಅವರಿಗೆ 'ಜಯಶ್ರೀ ಟ್ರಸ್ಟ್‌ನ ಪ್ರಶಸ್ತಿ' ನೀಡಲಾಯಿತು. ಮರಾಠ ರೆಜಿಮೆಂಟ್‌ನ ಹವಾಲ್ದಾರ್ ಎಂ.ಎಸ್. ರವಿಕುಮಾರ್ ಹಾಗೂ ಗದಗ ವೀರೇಶ್ವರ ಪುಣ್ಯಾಶ್ರಮದ ಕಲ್ಲಯ್ಯಜ್ಜ ಅವರನ್ನು ಗೌರವಿಸಲಾಯಿತು. ಗಾಂಧಿ ಭವನ ಪ್ರಕಾಶನ ಹೊರತರಲಾದ 5 ಪುಸ್ತಕ ಹಾಗೂ ಮನೋರೋಗ ತಜ್ಞ ಡಾ.ಸಿ.ಆರ್.ಚಂದ್ರಶೇಖರ್ ಅವರ 'ಸ್ಕಿಲ್ಸ್ ಫಾರ್ ಸ್ಟೂಡೆಂಟ್ಸ್' ಪುಸ್ತಕವನ್ನು ಬಿಡುಗಡೆ ಮಾಡಲಾಯಿತು. ಕಾರ್ಯಕ್ರಮದ ನಂತರ ಮುಖ್ಯಮಂತ್ರಿಗಳು ಖಾದಿ ಎಂಪೋರಿಯಂಗೆ ಭೇಟಿ ನೀಡಿ ಖಾದಿ ಬಟ್ಟೆಗಳನ್ನು ಖರೀದಿಸಿದರು.

### ಡಾ.ಸಿ.ಆರ್. ಚಂದ್ರಶೇಖರ್‌ಗೆ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ಪ್ರದಾನ



ಬೆಂಗಳೂರಿನ ಗಾಂಧಿ ಭವನದಲ್ಲಿ ಭಾನುವಾರ ನಡೆದ ಕಾರ್ಯಕ್ರಮದಲ್ಲಿ ಸಿಎಂ ಬೊಮ್ಮಾಯಿ ಮನೋರೋಗ ತಜ್ಞ ಡಾ.ಸಿ.ಆರ್. ಚಂದ್ರಶೇಖರ್ ಅವರಿಗೆ 2022ನೇ ಸಾಲಿನ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ಪ್ರದಾನ ಮಾಡಿದರು. ಸಚಿವರಾದ ಆರಗ ಜ್ಞಾನೇಂದ್ರ , ಗೋವಿಂದ ಕಾರಜೋಳ, ಎಂ.ಟಿ.ಬಿ. ನಾಗರಾಜ್, ಮಾಜಿ ಸಚಿವ ಎಚ್. ಕೆ.ಪಾಟೀಲ್, ವಾರ್ತಾ ಇಲಾಖೆ ಆಯುಕ್ತ ಡಾ. ಪಿ.ಎಸ್. ಹರ್ಷ, ಡಾ. ವೂಡೇ ಪಿ. ಕೃಷ್ಣ ಉಪಸ್ಥಿತರಿದ್ದರು.

### ಎಲ್ಲ ರಾಜಕಾರಣಿಗಳದ್ದು ಸುಳ್ಳಿನ ಅನ್ವೇಷಣೆ!

**ಬೆಂಗಳೂರು:** ''ಗಾಂಧೀಜಿಯವರ ಸತ್ಯದ ಆದರ್ಶ ಅನುಸರಿಸದೆ ರಾಜಕಾರಣಿಗಳಾದಿಯಾಗಿ ಇಂದು ನಾವು ಸುಳ್ಳುಗಳ ಸರಮಾಲೆಯಲ್ಲಿ ಬದುಕುತ್ತಿದ್ದೇವೆ. ನಮ್ಮದು ಸ್ವಾರ್ಥಕ್ಕಾಗಿ ಹೇಳುವ ಸುಳ್ಳಾಗಿದ್ದು, ರೂಢಿಗತವಾದ ಸುಳ್ಳುಗಳನ್ನು ಕಡಿಮೆ ಮಾಡಿದರೆ ಸತ್ಯದ ಹಾದಿಯಲ್ಲಿ ಸಾಗಬಹುದು'' ಎಂದು ಸಿಎಂ ಬಸವರಾಜ ಬೊಮ್ಮಾಯಿ ಅಭಿಪ್ರಾಯಪಟ್ಟರು.

ಗಾಂಧಿ ಸ್ಮಾರಕ ನಿಧಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಸಹಯೋಗ ದಲ್ಲಿ ಭಾನುವಾರ ಬೆಂಗಳೂರಿನಲ್ಲಿ ನಡೆದ ಗಾಂಧಿ ಜಯಂತಿ ಸಮಾರಂಭದಲ್ಲಿ ಡಾ.ಸಿ.ಆರ್. ಚಂದ್ರಶೇಖರ್ ಅವರಿಗೆ ಪ್ರಸಕ್ತ ಸಾಲಿನ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ಪ್ರದಾನ ಮಾಡಿ ಮಾತನಾಡಿದರು.

''ಗಾಂಧೀಜಿ ಸತ್ಯದ ಹಾದಿಯಲ್ಲಿ ಮುನ್ನಡೆದರು. ಆದರೆ, ನಾವು ಇಂದು ಸುಳ್ಳು ಹೇಳುವ ಅನಿವಾರ್ಯತೆ ಸೃಷ್ಟಿಸಿಕೊಂಡಿದ್ದೇವೆ. ನಾನು ಎರಡು ಬಾರಿ ಗಾಂಧಿ ಆತ್ಮ ಚರಿತ್ರೆ ಓದಿದ್ದೇನೆ. ಮೊದಲ ಬಾರಿ ಓದಿದಾಗ ಅರ್ಥವಾಗಲಿಲ್ಲ. ಎರಡನೇ ಬಾರಿ ಅರ್ಥವಾಯಿತು. ಹೀಗಾಗಿ ನಮ್ಮ ಜೀವನದ ಆತ್ಮಚರಿತ್ರೆಯನ್ನು 'ಮೈ ಎಕ್ಸ್‌ಪರಿಮೆಂಟ್ಸ್ ವಿಥ್ ಲೈ' ಎನ್ನಬಹುದು,'' ಎಂದರು.

### 'ಎಲ್ಲವೂ ನಿಮ್ಹಾನ್ಸ್‌ಗೆ ಅರ್ಪಣೆ'

ಪ್ರಶಸ್ತಿಯೊಂದಿಗೆ ಸ್ವೀಕರಿಸಿದ 5 ಲಕ್ಷ ರೂ. ಮೊತ್ತದ ಚೆಕ್ ಅನ್ನು ನಿಮ್ಹಾನ್ಸ್ ಆಸ್ಪತ್ರೆ ಅಭಿವೃದ್ಧಿಗೆ ನೀಡುವುದಾಗಿ ಚಂದ್ರಶೇಖರ್ ಘೋಷಿಸಿದರು. ''ನನ್ನ ನಿವೃತ್ತಿಯಿಂದ ಬಂದ 1.09 ಕೋಟಿ ಹಣ ಮತ್ತು ನನ್ನ ಎರಡು ಮನೆಗಳು ಮತ್ತು ನಿವೇಶನಗಳ ಹಣವನ್ನು ನನ್ನ ಪತ್ನಿ ಹೆಸರಿನಲ್ಲಿ ನಿಮ್ಹಾನ್ಸ್‌ಗೆ ಅರ್ಪಿಸಿದ್ದೇನೆ. ಈಗಾಗಲೇ ಅದರ ಹೆಸರಿಗೆ ವಿಲ್ ಮಾಡಿದ್ದೇನೆ'' ಎಂದು ಚಂದ್ರಶೇಖರ್ ಪ್ರಕಟಿಸಿದರು.

### ಪೊರಕೆ ಹಿಡಿದ ಸ್ಪೀಕರ್



**ಶಿರಸಿ:** ಗಾಂಧಿ ಜಯಂತಿ ದಿನವಾದ ಭಾನುವಾರ ನಗರದ ಹಳೆಬಸ್ ನಿಲ್ದಾಣ ಸಮೀಪ ಹಾಗೂ ಬಿಡಕಿಬಯಲಿನಲ್ಲಿ ವಿಧಾನಸಭಾ ಸ್ಪೀಕರ್ ವಿಶ್ವೇಶ್ವರ ಹೆಗಡೆ ಕಾಗೇರಿ ಕೈಯಲ್ಲಿ ಪೊರಕೆ ಹಿಡಿದು ಸ್ವಚ್ಛಗೊಳಿಸುವ ಕಾರ್ಯ ಮಾಡಿದರು. ಬಿಡಕಿಬೈಲಿನಲ್ಲಿರುವ ಗಾಂಧಿ ಪುತ್ಥಳಿಗೆ ಮಾಲಾರ್ಪಣೆ ಮಾಡಿ ಪೂಜೆ ಸಲ್ಲಿಸಿದರು. ಬಳಿಕ ಮಾತನಾಡಿ, ''ಸೇವೆಗೆ ನಿಜವಾದ ಅರ್ಥ ಮಹಾತ್ಮಾ ಗಾಂಧೀಜಿ. ಅವರು ದೇಶಕ್ಕೆ ಮಾಡಿದ ಅನುಪಮ ಸೇವೆಯಿಂದಾಗಿ ಮಹಾತ್ಮ ಎನಿಸಿಕೊಂಡವರು. ಗಾಂಧೀಜಿಯವರು ಇಡೀ ಜಗತ್ತೇ ಕೊಂಡಾಡುವ ನಮ್ಮ ಭಾರತದ ವ್ಯಕ್ತಿ ಮತ್ತು ಶಕ್ತಿ ಎನ್ನುವುದೇ ನಮಗೆಲ್ಲಾ ಹೆಮ್ಮೆಯ ವಿಷಯವಾಗಿದೆ,'' ಗಾಂಧೀಜಿಯವರು ಸ್ವದೇಶಿ ವಸ್ತುವಿಗೆ ಒತ್ತು ನೀಡುವ ಮೂಲಕ ವಿದೇಶಿ ವಸ್ತುಗಳನ್ನು ವಿರೋಧಿಸಿದ್ದರು. ಇದರಿಂದಾಗಿ ಖಾದಿ ವಸ್ತ್ರಕ್ಕೆ ಹೆಚ್ಚಿನ ಬೆಲೆ ಬರುವಂತೆ ಮಾಡಿದರು. ಅವರಂತೆ ಭಾರತದ ಪ್ರಧಾನಿಯಾಗಿದ್ದ ಲಾಲ್ ಬಹಾದ್ದೂರ್ ಶಾಸ್ತ್ರಿಯವರೂ ರಾಷ್ಟ್ರ ನಿರ್ಮಾಣಕ್ಕೆ ಅವಿಸ್ಮರಣೀಯ ಕೊಡುಗೆ ನೀಡಿದ್ದಾರೆ. ಅವರು ಜೈ ಜವಾನ್ ಜೈ ಕಿಸಾನ್ ಎನ್ನುವ ಮೂಲಕ ರಾಷ್ಟ್ರದಲ್ಲಿ ಹಸಿರು ಕ್ರಾಂತಿ ಮಾಡಿದರೆಂದು ಹೇಳಿದರು.

ವಿಶ್ವವಾಣಿ

03.10.2022 ಸೋಮವಾರ
vishwavani.news

### ಮನೋರೋಗ ತಜ್ಞ ಡಾ.ಸಿ.ಆರ್. ಚಂದ್ರಶೇಖರ್‌ಗೆ 2022ನೇ ಸಾಲಿನ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪ್ರದಾನ

# ವರ್ಷದೊಳಗೆ ಬಾಕಿ 7 ಜಿಲ್ಲೆಗಳಲ್ಲಿ ಗಾಂಧಿಭವನ

**ಬೆಂಗಳೂರು:** ಕರ್ನಾಟಕ ಸರಕಾರದ ವತಿಯಿಂದ ಈಗಾಗಲೇ 23 ಜಿಲ್ಲೆಗಳಲ್ಲಿ ಗಾಂಧಿಭವನ ನಿರ್ಮಿಸಲಾಗಿದ್ದು, 7 ಜಿಲ್ಲೆಗಳಲ್ಲಿ ಒಂದು ವರ್ಷದೊಳಗೆ ನಿರ್ಮಾಣ ಮಾಡಲಾಗುವುದು ಎಂದು ಸಿಎಂ ಬಸವರಾಜ ಬೊಮ್ಮಾಯಿ ಅವರು ತಿಳಿಸಿದರು.

ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಹಾಗೂ ಕರ್ನಾಟಕ ಗಾಂಧಿಸ್ಮಾರಕ ನಿಧಿ ಸಂಯುಕ್ತ ಆಶ್ರಯದಲ್ಲಿ ನಗರದ ಗಾಂಧಿ ಭವನದ ಮಹಾದೇವ ದೇಸಾಯಿ ಸಭಾಂಗಣದಲ್ಲಿ ಭಾನುವಾರ ನಡೆದ ಮಹಾತ್ಮ ಗಾಂಧಿ ಜಯಂತಿ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಸುಪ್ರಸಿದ್ಧ ಮನೋರೋಗ ತಜ್ಞ ಡಾ.ಸಿ.ಆರ್. ಚಂದ್ರಶೇಖರ್ ಅವರಿಗೆ ರಾಜ್ಯ ಸರಕಾರದ ಪ್ರತಿಷ್ಠಿತ 2022ನೇ ಸಾಲಿನ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪ್ರದಾನ ಮಾಡಿ ಅವರು ಮಾತನಾಡಿ, ಈ ಜಿಲ್ಲೆಗಳಲ್ಲಿ ಗಾಂಧಿಭವನ ನಿರ್ಮಾಣಕ್ಕೆ ಬೇಕಾದ ನಿವೇಶನ ಮತ್ತು ಅನುದಾನ ಒದಗಿಸಲು ಕ್ರಮವಹಿಸಲಾಗುವುದು ಎಂದು ಅವರು ಹೇಳಿದರು.



ಗಾಂಧಿ ಭವನದ ಮಹಾದೇವ ದೇಸಾಯಿ ಸಭಾಂಗಣದಲ್ಲಿ ಹಮ್ಮಿಕೊಂಡಿದ್ದ ಗಾಂಧಿ ಜಯಂತಿ ಕಾರ್ಯಕ್ರಮವನ್ನು ಸಿಎಂ ಬೊಮ್ಮಾಯಿ ಉದ್ಘಾಟಿಸಿದರು. ಸಚಿವ ಗೋವಿಂದ ಕಾರಜೋಳ ಮತ್ತಿತರರು ಇದ್ದರು.

ಖಾದಿ, ಗ್ರಾಮೀಣ ಕೈಗಾರಿಕೆಗೆ ಹೆಚ್ಚಿನ ಒತ್ತು ನೀಡುವ ನಿಟ್ಟಿನಲ್ಲಿ ವಿಶೇಷ ಕ್ರಮಗಳನ್ನು ಕೈಗೊಳ್ಳಲಾಗುವುದು. ಈ ಮೂಲಕ ಮಾರುಕಟ್ಟೆ ಒದಗಿಸಲಾಗುವುದು ಎಂದು ಹೇಳಿದ ಸಿಎಂ ಅವರು ಮನೋತಜ್ಞ ಡಾ.ಸಿ.ಆರ್.ಚಂದ್ರಶೇಖರ್ ಅವರಿಗೆ ಬಂದಿರುವುದರಿಂದ ಪ್ರಶಸ್ತಿಗೆ ಮೌಲ್ಯ ಬಂದಿದೆ. ಅವರ ಸೇವೆಯನ್ನು ನಮ್ಮ ಸರಕಾರ ಬಳಸಿಕೊಳ್ಳಲಿದೆ ಎಂದರು. ಗ್ರಾಮಗಳ ಅಭಿವೃದ್ಧಿ ಬಹಳ ಮುಖ್ಯವಾಗಿದ್ದು, ಕರ್ನಾಟಕ ಈ ವಿಷಯದಲ್ಲಿ ಬಹಳ ಮುಂದೆ ಇದೆ. ಹಳ್ಳಿಗಳಲ್ಲಿ ಕೂಡ ಡಿಜಿಟಲ್ ಕ್ರಾಂತಿಯಿಂದ ಬಹಳಷ್ಟು ಅನುಕೂಲಗಳಾಗುತ್ತಿವೆ. ತಂತ್ರಜ್ಞಾನ ಕ್ರಾಂತಿಯಿಂದ ಹಳ್ಳಿಗಳಲ್ಲಿ ಸರಕಾರದ ಅನೇಕ ಸೇವೆಗಳನ್ನು ಒದಗಿಸುತ್ತಿದ್ದು, ಇನ್ನಷ್ಟು ಸೇವೆಗಳನ್ನು ಒದಗಿಸಲು ಕ್ರಮ ವಹಿಸಲಾಗುವುದು ಎಂದರು.

ಸಚಿವರಾದ ಗೋವಿಂದ ಕಾರಜೋಳ, ಆರಗ ಜ್ಞಾನೇಂದ್ರ, ಎಂ.ಟಿ.ಬಿ.ನಾಗರಾಜ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ, ಶಾಸಕ ರಾಜೀವ್, ರಾಜ್ಯಸಭಾ ಸದಸ್ಯ ಎಲ್. ಹನುಮಂತಯ್ಯ, ಎಚ್.ಹನುಮಂತಪ್ಪ, ಎಸ್.ಜಿ. ಸುಶೀಲಮ್ಮ, ಜೇರಿಗೆ ಲೋಕೇಶ್ ಹಾಜರಿದ್ದರು.

ಗಾಂಧಿ ಅನುಯಾಯಿ ಕಡಿದಾಳ್ ಮಂಜಪ್ಪ, ಹುತಾತ್ಮ ಮೈಲಾರ ಮಹಾದೇವ, ವಿದ್ಯಾರ್ಥಿಗಳು, ಕವನಗಳಲ್ಲಿ ಮೂಡಿದ ಗಾಂಧಿ ಎಂಬ ಕೃತಿ ಬಿಡುಗಡೆ ಮಾಡಲಾಯಿತು. ಲೇಖಕಿ ಡಾ.ಕೆ.ಆರ್. ಸಂಧ್ಯಾರೆಡ್ಡಿಗೆ ಜಯಶ್ರೀ ಟ್ರಸ್ಟ್‌ನ ಪ್ರಶಸ್ತಿ ನೀಡಲಾಯಿತು. ಮರಾಠ ರೆಜಿಮೆಂಟ್‌ನ ಹವಾಲ್ದಾರ್ ಎಂ.ಎಸ್. ರವಿಕುಮಾರ್ ಹಾಗೂ ಗದಗದ ವೀರೇಶ್ವರ ಪುಣ್ಯಾಶ್ರಮದ ಕಲ್ಲಯ್ಯಜ್ಜ ಅವರನ್ನು ಗೌರವಿಸಲಾಯಿತು.

## ಪ್ರಶಸ್ತಿ ಹಣ ನಿಮ್ಹಾನ್ಸ್‌ಗೆ

ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿಯಿಂದ ಬಂದ ನಗದನ್ನು ನಿಮ್ಹಾನ್ಸ್‌ಗೆ ನೀಡಲಾಗುವುದು ಎಂದು ಪ್ರಶಸ್ತಿ ಪುರಸ್ಕೃತ, ಸುಪ್ರಸಿದ್ಧ ಮನೋರೋಗ ತಜ್ಞ ಡಾ.ಸಿ.ಆರ್. ಚಂದ್ರಶೇಖರ್ ಅವರು ಘೋಷಿಸಿದರು.

ಕನ್ನಡಪ್ರಭ
ಸೋಮವಾರ 3.10.2022

# ರಾಜಕಾರಣಿಗಳು ಕಡಿಮೆ ಸುಳ್ಳು ಹೇಳಬೇಕು: ಸಿಎಂ

## ಬದುಕಲ್ಲಿ ಕಷ್ಟ ಬಂದ್ರೆ ಗಾಂಧೀಜಿ ಜೀವನ ಚರಿತ್ರೆ ಓದಿ: ಬೊಮ್ಮಾಯಿ | ಡಾ.ಸಿ.ಆರ್.ಚಂದ್ರಶೇಖರ್‌ಗೆ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪ್ರದಾನ

• ಕನ್ನಡಪ್ರಭ ವಾರ್ತೆ ಬೆಂಗಳೂರು

ರಾಜಕಾರಣಿಗಳು ಸ್ವಾರ್ಥಕ್ಕಾಗಿ ಸುಳ್ಳು ಹೇಳುತ್ತಿದ್ದು, ಇದನ್ನು ಕಡಿಮೆ ಮಾಡಬೇಕು..ಬದುಕಿನಲ್ಲಿ ಎಂತಹ ಕಷ್ಟದ ಸಂದರ್ಭ ಬಂದರೂ ಒಮ್ಮೆ ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ಜೀವನ ಚರಿತ್ರೆ ಓದಿದರೆ ಪರಿಹಾರ ಸಿಗುತ್ತದೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅಭಿಪ್ರಾಯಪಟ್ಟರು.

ಕುಮಾರಕೃಪಾ ರಸ್ತೆಯ ಗಾಂಧಿ ಭವನದಲ್ಲಿ ಭಾನುವಾರ ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ವಾರ್ತಾ ಇಲಾಖೆ ಸಹಯೋಗದೊಂದಿಗೆ, ಆಯೋಜಿಸಿದ್ದ ಗಾಂಧಿ ಜಯಂತಿ ಕಾರ್ಯಕ್ರಮ ಉದ್ಘಾಟಿಸಿ, ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪ್ರದಾನ ಮಾಡಿ ಅವರು ಮಾತನಾಡಿದರು.

ನಾವು ಸ್ವಾರ್ಥಕ್ಕಾಗಿ ಸುಳ್ಳು ಹೇಳುತ್ತಿದ್ದು ಇದು ಕಡಿಮೆಯಾಗಬೇಕು. ರೂಢಿಗತವಾಗಿ ಅಭ್ಯಾಸವಾಗಿರುವ ಅನವಶ್ಯಕ ಸುಳ್ಳುಗಳೂ ಒಳ್ಳೆಯದಲ್ಲ. ಗಾಂಧೀಜಿಯವರ ಜೀವನ ಚರಿತ್ರೆ 'ದಿ ಸ್ಟೋರಿ ಆಫ್ ಮೈ ಎಕ್ಸ್‌ಪಿರಿಮೆಂಟ್ಸ್ ವಿಥ್ ಟ್ರುತ್' ಓದಿದರೆ ಸತ್ಯ ಹೇಳಲು ಪ್ರೇರಣೆ ಸಿಗುತ್ತದೆ. ಇದು ಗಾಂಧೀಜಿಯವರ ಬದುಕಿನ ತೆರೆದ ಪುಸ್ತಕವಾಗಿದ್ದು, ಎಂತಹ ಕಷ್ಟದ ಸಂದರ್ಭಕ್ಕೂ ಪರಿಹಾರ ಸಿಗುತ್ತದೆ. ನನ್ನ ಜೀವನವೇ ನನ್ನ ಸಂದೇಶ ಎಂದು ಹೇಳಿದ ಜಗತ್ತಿನ ಏಕೈಕ ವ್ಯಕ್ತಿ ಗಾಂಧೀಜಿಯವರು ಎಂದು ಸ್ಮರಿಸಿದರು.

ಗಾಂಧೀಜಿಯವರ ಕನಸಿನಂತೆ ಸರ್ಕಾರ ಗ್ರಾಮ ಸ್ವರಾಜ್ಯಕ್ಕೆ ಆದ್ಯತೆ ನೀಡುತ್ತಿದೆ. ದುಡಿಯುವ ಕೈಗಳಿಗೆ ಉದ್ಯೋಗ ನೀಡಲಾಗುತ್ತಿದೆ. ಹಳ್ಳಿಗಳು ಸಮೃದ್ಧವಾದರೆ ದೇಶ ಸಮೃದ್ಧವಾದಂತೆ. ಇದರಿಂದ ಸಂಪತ್ತು ಹಂಚಿಕೆಯಾಗುತ್ತದೆ. ಕೆಲವರ ಕೈಯಲ್ಲಿ ಸಂಪತ್ತು ಶೇಖರವಾದರೆ ಅನಾಹುತವಾಗುತ್ತದೆ. ಆದ್ದರಿಂದಲೇ ಅಧಿಕಾರ ವಿಕೇಂದ್ರೀಕರಣದ ಮೂಲಕ ಗ್ರಾಮ ಪಂಚಾಯ್ತಿಗಳಿಗೆ ಹೆಚ್ಚು ಅಧಿಕಾರ ನೀಡಲಾಗುತ್ತಿದ್ದು ಗ್ರಾಮ ಪಂಚಾಯ್ತಿಗಳನ್ನು ಡಿಜಟಲೀಕರಣ ಮಾಡಲಾಗುತ್ತಿದೆ ಎಂದು ವಿವರಿಸಿದರು.

**7 ಜಿಲ್ಲೆಯಲ್ಲಿ ಗಾಂಧಿ ಭವನ:** ಈಗಾಗಲೇ 23 ಜಿಲ್ಲೆಯಲ್ಲಿ ಗಾಂಧಿ ಭವನ ನಿರ್ಮಿಸಲಾಗಿದೆ. ಉಳಿದ 7 ಜಿಲ್ಲೆಯಲ್ಲಿ ವರ್ಷದೊಳಗೆ ಗಾಂಧಿ ಭವನಗಳನ್ನು ನಿರ್ಮಿಸಲಾಗುವುದು. ಇದಕ್ಕೆ ಅಗತ್ಯವಾದ ಭೂಮಿ, ಅನುದಾನ ಒದಗಿಸಲಾಗುವುದು. ಖಾದಿಯನ್ನು ಮುಂಚೂಣಿ ಕೈಗಾರಿಕೆ ಮಾಡಲು ತೀರ್ಮಾನ ಮಾಡಿದ್ದೇವೆ ಎಂದು ಭರವಸೆ ನೀಡಿದರು.

ಗೋವಾ ಚಳವಳಿ, ಸ್ವಾತಂತ್ರ್ಯ ಹೋರಾಟದಲ್ಲಿ ಶ್ರಮಿಸಿದ ಹಲವರನ್ನು ಇದೇ ಸಂದರ್ಭದಲ್ಲಿ ಮುಖ್ಯಮಂತ್ರಿಗಳು ಸನ್ಮಾನಿಸಿದರು. ಗದಗಿನ ವೀರಶೈವ ಪುಣ್ಯಾಶ್ರಮದ ಕಲ್ಲಯ್ಯ ಸ್ವಾಮೀಜಿ, ಸಚಿವರಾದ ಗೋವಿಂದ ಕಾರಜೋಳ, ಆರಗ ಜ್ಞಾನೇಂದ್ರ, ಎಂಟಿಬಿ ನಾಗರಾಜ್, ಶಾಸಕ ಪಿ. ರಾಜೀವ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ.ಕೃಷ್ಣ, ಸುಮಂಗಲಿ ಸೇವಾಶ್ರಮದ ಅಧ್ಯಕ್ಷೆ ಸುಶೀಲಮ್ಮ ಮತ್ತಿತರರು ಉಪಸ್ಥಿತರಿದ್ದರು.



ಮನೋ ವಿಜ್ಞಾನಿ ಡಾ.ಚಂದ್ರಶೇಖರ್ ಅವರಿಗೆ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿಯನ್ನು ಸಿಎಂ ಪ್ರದಾನ ಮಾಡಿದರು.

### 1 ಕೋಟಿ ಹಣ, 2 ಮನೆ ನಿಮ್ಹಾನ್ಸ್‌ಗೆ: ಡಾ.ಚಂದ್ರಶೇಖರ್

ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರಿಂದ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ಸ್ವೀಕರಿಸಿದ ಹಿರಿಯ ಮನೋ ವಿಜ್ಞಾನಿ ಡಾ.ಸಿ.ಆರ್.ಚಂದ್ರಶೇಖರ್ ಅವರು ಪ್ರಶಸ್ತಿಯ ಮೊತ್ತ 5 ಲಕ್ಷ ರುಪಾಯಿಯನ್ನು ನಿಮ್ಹಾನ್ಸ್‌ಗೆ ನೀಡುವುದಾಗಿ ಪ್ರಕಟಿಸಿದರು. 'ಪ್ರಶಸ್ತಿಯ ಮೊತ್ತದ ಜೊತೆಗೆ ನಿವೃತ್ತಿಯಾದಾಗ ಬಂದ 1.09 ಕೋಟಿ ರು. ಮತ್ತು ಎರಡು ಮನೆಗಳನ್ನು ನಿಮ್ಹಾನ್ಸ್‌ಗೆ ನೀಡುತ್ತೇನೆ. ಶಾಲಾ-ಕಾಲೇಜುಗಳಲ್ಲಿ ಮಾನಸಿಕ ಆರೋಗ್ಯದ ಬಗ್ಗೆ ಪಠ್ಯ ಅಳವಡಿಸಬೇಕು' ಎಂದು ಚಂದ್ರಶೇಖರ್ ಸಲಹೆ ನೀಡಿದರು.

ಪ್ರಜಾವಾಣಿ

ಸೋಮವಾರ • ಅಕ್ಟೋಬರ್ 3, 2022

# 7 ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಾಣಕ್ಕೆ ಕ್ರಮ

## ಡಾ.ಸಿ.ಆರ್.ಚಂದ್ರಶೇಖರ್‌ಗೆ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪ್ರದಾನ

ಪ್ರಜಾವಾಣಿ ವಾರ್ತೆ



ಬೆಂಗಳೂರಿನಲ್ಲಿ ಭಾನುವಾರ ನಡೆದ ಗಾಂಧಿ ಜಯಂತಿ ಕಾರ್ಯಕ್ರಮದಲ್ಲಿ ಮನೋವೈದ್ಯ ಡಾ. ಸಿ.ಆರ್. ಚಂದ್ರಶೇಖರ್ ಅವರಿಗೆ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ'ಯನ್ನು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಪ್ರದಾನ ಮಾಡಿದರು. (ಎಡದಿಂದ) ಸುಮಂಗಲಿ ಸೇವಾಶ್ರಮದ ಅಧ್ಯಕ್ಷೆ ಎಸ್.ಜಿ.ಸುಶೀಲಮ್ಮ, ಸಚಿವ ಆರಗ ಜ್ಞಾನೇಂದ್ರ, ವೂಡೆ ಪಿ. ಕೃಷ್ಣ, ಎಚ್.ಕೆ.ಪಾಟೀಲ್, ನಿವೃತ್ತ ನ್ಯಾಯಮೂರ್ತಿ ಎ.ವಿ. ಚಂದ್ರಶೇಖರ್, ಡಾ.ಪಿ.ಎಸ್. ಹರ್ಷ ಇದ್ದರು. ಪ್ರಜಾವಾಣಿ ಚಿತ್ರ

ಬೆಂಗಳೂರು: 'ರಾಜ್ಯದ ಏಳು ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಾಣ ಕಾರ್ಯ ಬಾಕಿ ಉಳಿದಿದೆ. ಈ ಜಿಲ್ಲೆಗಳಲ್ಲೂ ಇನ್ನೊಂದು ವರ್ಷದಲ್ಲಿ ಗಾಂಧಿ ಭವನಗಳನ್ನು ನಿರ್ಮಿಸಲು ಕ್ರಮ ಕೈಗೊಳ್ಳಲಾಗುವುದು' ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಪ್ರಕಟಿಸಿದರು.

ಭಾನುವಾರ ಗಾಂಧಿ ಸ್ಮಾರಕ ನಿಧಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ವತಿಯಿಂದ ನಡೆದ ಗಾಂಧಿ ಜಯಂತಿ ಕಾರ್ಯಕ್ರಮದಲ್ಲಿ ಮನೋವೈದ್ಯ ಡಾ.ಸಿ.ಆರ್. ಚಂದ್ರಶೇಖರ್ ಅವರಿಗೆ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ಪ್ರದಾನ ಮಾಡಿ ಮಾತನಾಡಿದರು.

'23 ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಿಸಲಾಗಿದೆ. ಜಾಗದ ಸಮಸ್ಯೆಯ ಕಾರಣಕ್ಕೆ ಈ ಜಿಲ್ಲೆಗಳಲ್ಲಿ ಭವನ ನಿರ್ಮಾಣ ಕಾರ್ಯವು ನನೆಗುದಿಗೆ ಬಿದ್ದಿದೆ' ಎಂದರು.

'ಖಾದಿ ಉದ್ಯಮ, ಗ್ರಾಮೀಣ ಕೈಗಾರಿಕೆಗಳ ಬೆಳವಣಿಗೆಗೆ ಹೊಸ ಯೋಜನೆ ಜಾರಿಗೊಳಿಸಿ ಮಾರುಕಟ್ಟೆ ವ್ಯವಸ್ಥೆ ಕಲ್ಪಿಸಲಾಗುವುದು. ಗ್ರಾಮೀಣ ಕೈಗಾರಿಕೆಗಳು, ಬೆಳವಣಿಗೆಯಾದರೆ ಸ್ಥಳೀಯ ಮಟ್ಟದಲ್ಲೇ ಉದ್ಯೋಗ ಸೃಷ್ಟಿಯಾಗಲಿದೆ' ಎಂದು ಹೇಳಿದರು.

'ಮೋಹನದಾಸ ಕರಮಚಂದ ಗಾಂಧಿಯಿಂದ ಮಹಾತ್ಮ ಆಗುವ ತನಕ

> ಮಾನಸಿಕ ಒತ್ತಡದಿಂದ ಕಾಯಿಲೆಗೆ ತುತ್ತಾಗುತ್ತಿದ್ದೇವೆ. ಶಾಲಾ–ಕಾಲೇಜು ಹಂತದಲ್ಲಿ ಮಾನಸಿಕ ಆರೋಗ್ಯ ವಿಷಯವನ್ನು ಪಠ್ಯದಲ್ಲಿ ಅಳವಡಿಸಬೇಕು
>
> ಡಾ.ಸಿ.ಆರ್.ಚಂದ್ರಶೇಖರ್, ಮನೋವೈದ್ಯ

ಗಾಂಧೀಜಿ ಅವರ ಪಯಣ ಅದ್ಭುತ. ಸದಾ ಪರಿವರ್ತನೆ, ಶುದ್ಧೀಕರಣಕ್ಕೆ ತೆರೆದುಕೊಂಡಿದ್ದರು' ಎಂದರು.

ಶಾಸಕ ಎಚ್.ಕೆ.ಪಾಟೀಲ್, 'ಗಾಂಧೀಜಿ ಅವರದ್ದು ಚರ್ಚಿಸುವ ವ್ಯಕ್ತಿತ್ವ ಅಲ್ಲ; ಧ್ಯಾನಿಸುವ ವ್ಯಕ್ತಿತ್ವ. ಗ್ರಾಮೀಣಾಭಿವೃದ್ಧಿಯಿಂದ ರಾಷ್ಟ್ರ ಕಲ್ಯಾಣ ಸಾಧ್ಯ ಎಂದು ಗಾಂಧೀಜಿ ಪ್ರತಿಪಾದಿಸಿದ್ದರು' ಎಂದು ವಿವರಿಸಿದರು.

'ಗಾಂಧಿ ಅನುಯಾಯಿ ಕಡಿದಾಳ್ ಮಂಜಪ್ಪ', 'ಹುತಾತ್ಮ ಮೈಲಾರ ಮಹಾದೇವ', 'ವಿದ್ಯಾರ್ಥಿಗಳು', ಕವನಗಳಲ್ಲಿ ಮೂಡಿದ 'ಗಾಂಧಿ' ಕೃತಿಗಳನ್ನು ಕಾರ್ಯಕ್ರಮದಲ್ಲಿ ಬಿಡುಗಡೆ ಮಾಡಲಾಯಿತು.

### ₹5 ಲಕ್ಷ ಆಸ್ಪತ್ರೆಗೆ ದೇಣಿಗೆ

ಪ್ರಶಸ್ತಿ ಜತೆಗೆ ಸ್ವೀಕರಿಸಿದ ₹ 5 ಲಕ್ಷ ಮೊತ್ತದ ಚೆಕ್ ಅನ್ನು ನಿಮ್ಹಾನ್ಸ್ ಅಭಿವೃದ್ಧಿಗೆ ನೀಡುವುದಾಗಿ ಡಾ.ಸಿ.ಆರ್. ಚಂದ್ರಶೇಖರ್ ಘೋಷಿಸಿದರು.

'ನನ್ನ ಪಿಎಫ್ ಸೇರಿದಂತೆ ಉಳಿಕೆ ಮೊತ್ತ ₹ 1.9 ಕೋಟಿ ಹಾಗೂ ಎರಡು ಮನೆ, ನಿವೇಶನಗಳನ್ನೂ ಮಾರಾಟ ಮಾಡಿ ಇದೇ ಆಸ್ಪತ್ರೆಯ ಅಭಿವೃದ್ಧಿಗೆ ನೀಡಲಾಗುವುದು' ಎಂದು ಹೇಳಿದರು.

ಲೇಖಕಿ ಡಾ.ಕೆ.ಆರ್.ಸಂಧ್ಯಾರೆಡ್ಡಿ ಅವರಿಗೆ 'ಜಯಶ್ರೀ ಟ್ರಸ್ಟ್ ಪುರಸ್ಕಾರ' ಅನ್ನು ಇದೇ ಸಂದರ್ಭದಲ್ಲಿ ಪ್ರದಾನ ಮಾಡಲಾಯಿತು. ಮರಾಠ ರೆಜಿಮೆಂಟ್‌ನ ಹವಾಲ್ದಾರ್ ಎಂ.ಎನ್. ರವಿಕುಮಾರ್ ಹಾಗೂ ಗದಗದ ವೀರೇಶ್ವರ ಪುಣ್ಯಾಶ್ರಮದ ಕಲ್ಲಯ್ಯಜ್ಜ ಅವರನ್ನು ಗೌರವಿಸಲಾಯಿತು.

**ಖಾದಿ ಮಳಿಗೆಗೆ ಭೇಟಿ:** ನಗರದ ಗಾಂಧಿ ಭವನದ ಪಕ್ಕದಲ್ಲಿರುವ ಖಾದಿ ಗ್ರಾಮೋದ್ಯೋಗ ಮಳಿಗೆಗೆ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಭೇಟಿ ನೀಡಿ ಖಾದಿ ಬಟ್ಟೆ ಖರೀದಿಸಿದರು.

ಈ ಸಂಜೆ Oct 3, 2022



ಲಯನ್ಸ್ ಇಂಟರ್
ನ್ಯಾಷನಲ್ ಡಿ.317ಎ
ವತಿಯಿಂದ
ನೀಡಲಾಗುವ ಲಯನ್
ಡಾ.ಎಂ.ಸಿ.ಮೋದಿ ಸ್ಮಾರಕ
ಮಾನವೀಯ ಪ್ರಶಸ್ತಿಗೆ
ರಾಷ್ಟ್ರಪತಿಗಳ ರೆಡ್‌ಕ್ರಾಸ್
ಚಿನ್ನದ ಪದಕ ಪುರಸ್ಕೃತರಾದ
ನಾಡೋಜ ವ್ರೊಡೆ ಪಿ.ಕೃಷ್ಣ
ಅವರು ಭಾಜನರಾಗಿದ್ದಾರೆ.



ಗಾಂಧಿ ಜಯಂತಿ ಅಂಗವಾಗಿ ಏರ್ಪಡಿಸಲಾಗಿದ್ದ ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ಮನೋರೋಗ ತಜ್ಞ ಡಾ.ಸಿ.ಆರ್.ಚಂದ್ರಶೇಖರ್ ಅವರಿಗೆ ಪ್ರಸಕ್ತ ಸಾಲಿನ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪ್ರದಾನ ಮಾಡಿ ಸನ್ಮಾನಿಸಿದರು. ಈ ಸಂದರ್ಭದಲ್ಲಿ ಸಚಿವರಾದ ಆರಗ ಜ್ಞಾನೇಂದ್ರ, ಎಂಟಿಬಿ ನಾಗರಾಜ್, ಕಾಂಗ್ರೆಸ್ ಮುಖಂಡ ಹೆಚ್.ಕೆ.ಪಾಟೀಲ್, ಗಾಂಧಿ ಸ್ಮಾರಕ ನಿಧಿಯ ವೊಡೆ ಪಿ.ಕೃಷ್ಣ ಮುಂತಾದ ಗಣ್ಯರಿದ್ದರು.

# ಏಳು ಜಿಲ್ಲೆಗಳಲ್ಲಿ ಗಾಂಧಿ ಭವನ

ಬೆಂಗಳೂರು: ರಾಜ್ಯದ ಇಪ್ಪತ್ತೂರು ಜಿಲ್ಲೆಗಳಲ್ಲಿ ಸರ್ಕಾರದ ವತಿಯಿಂದ ಈಗಾಗಲೇ ಗಾಂಧಿ ಭವನಗಳನ್ನು ನಿರ್ಮಿಸಲಾಗಿದ್ದು, ಬಾಕಿ ಉಳಿದಿರುವ ಏಳು ಜಿಲ್ಲೆಗಳಲ್ಲೂ ಮುಂಬರುವ ಒಂದು ವರ್ಷದೊಳಗೆ ಗಾಂಧೀ ಭವನ ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸಲು ಕ್ರಮ ಕೈಗೊಳ್ಳುವುದಾಗಿ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ಹೇಳಿದರು.

ಗಾಂಧಿ ಜಯಂತಿ ಅಂಗವಾಗಿ ಭಾನುವಾರ ಗಾಂಧಿಭವನದಲ್ಲಿ ಏರ್ಪಡಿಸಲಾಗಿದ್ದ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಮಾತನಾಡಿದ ಅವರು, ಗಾಂಧಿ ಭವನ ನಿರ್ಮಾಣ ಕಾಮಗಾರಿಗೆ ಬೇಕಾದ ಅಗತ್ಯ ಜಾಗ ಮತ್ತು ಅನುದಾನವನ್ನು ಕೂಡಲೇ ಒದಗಿಸಲಾಗುವುದು ಎಂದು ಸ್ಪಷ್ಟಪಡಿಸಿದರು.

ಮುಂದಿನ ದಿನಗಳಲ್ಲಿ ಖಾದಿ ಉತ್ಪನ್ನಗಳಿಗೆ ಹೆಚ್ಚಿನ ಮಾರುಕಟ್ಟೆಯನ್ನು ಒದಗಿಸುವುದರೊಂದಿಗೆ ಖಾದಿ ಗ್ರಾಮೋದ್ಯೋಗಕ್ಕೆ ಒತ್ತು ನೀಡಲಾಗುವುದು. ಗ್ರಾಮಗಳಲ್ಲಿನ ಖಾದಿ ಕೇಂದ್ರಗಳಿಗೆ ಶಕ್ತಿ ತುಂಬುವ ನಿಟ್ಟಿನಲ್ಲಿ ಸರ್ಕಾರ ಹೆಜ್ಜೆಯನ್ನಿರಿಸಿದ್ದು, ಈ ಮೂಲಕ ಅಧಿಕ ಉದ್ಯೋಗಗಳನ್ನು ಸೃಷ್ಟಿಸಲಾಗುವುದು. ಹಳ್ಳಿ ಹಳ್ಳಿಗಳಿಗೂ ಆಧುನಿಕ ತಂತ್ರಜ್ಞಾನದ ಲಾಭ ದೊರೆಯುವಂತಾಗಲು ಸರ್ಕಾರ ಕ್ರಮ ಕೈಗೊಂಡಿದೆ. ಡಿಜಿಟಲೀಕರಣದ ಫಲವಾಗಿ ಯಾವುದೇ ಕಾಗದ ಪತ್ರಗಳು, ಪ್ರಮಾಣ ಪತ್ರಗಳು ನಾಗರಿಕರಿಗೆ ಗ್ರಾಮ ಮಟ್ಟದಲ್ಲೇ ಲಭ್ಯವಾಗುವಂತಾಗಿದೆ. ಡಿಜಿಟಲ್ ತಂತ್ರಜ್ಞಾನದ ಮೂಲಕ ಹಳ್ಳಿಗಳ ಅಭಿವೃದ್ಧಿಗೆ ಗುರಿ ಹೊಂದಲಾಗಿದೆ ಎಂದು ಮುಖ್ಯಮಂತ್ರಿಯವರು ಹೇಳಿದರು.

ಮನೋರೋಗ ತಜ್ಞ ಡಾ.ಸಿ.ಆರ್.ಚಂದ್ರಶೇಖರ್ ಅವರಿಗೆ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ನೀಡಿ ಗೌರವಿಸಿದರು. ಇದೇ ಸಂದರ್ಭದಲ್ಲಿ ಮಾತನಾಡಿದ ಪ್ರಶಸ್ತಿ ಪುರಸ್ಕೃತ ಡಾ.ಸಿ.ಆರ್.ಚಂದ್ರಶೇಖರ್, 2022ನೇ ಸಾಲಿನ ಮಹಾತ್ಮಾ ಗಾಂಧಿ ಸೇವಾ ಪ್ರಶಸ್ತಿಗೆ ಸಂಬಂಧಿಸಿದ ಐದು ಲಕ್ಷ ಹಣವನ್ನು ನಿಮ್ಹಾನ್ಸ್‌ಗೆ ನೀಡುವುದಾಗಿ ತಿಳಿಸಿದರು. ಅಲ್ಲದೆ ನನ್ನ ನಿವೃತ್ತಿ ಬಳಿಕ ಬಂದಂಥ ಸುಮಾರು ಒಂದು ಕೋಟಿ ಹಣವು ಸೇರಿದಂತೆ ಎರಡು ಮನೆಗಳು, ಎರಡು ನಿವೇಶನಗಳನ್ನು ನಿಮ್ಹಾನ್ಸ್‌ಗೆ ಕೊಡುಗೆಯಾಗಿ ಕೊಡುವುದಾಗಿ ಅವರು ಘೋಷಿಸಿದರು.

ಉದಯವಾಣಿ

ಸೋಮವಾರ, ಅಕ್ಟೋಬರ್ 3, 2022

# ವರ್ಷದೊಳಗೆ ಗಾಂಧಿ ಭವನ ನಿರ್ಮಾಣ ಪೂರ್ಣ

## 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ಪ್ರದಾನ ಮಾಡಿದ ಸಿಎಂ ಬಸವರಾಜ ಬೊಮ್ಮಾಯಿ

ಬೆಂಗಳೂರು: ರಾಜ್ಯದ ಜಿಲ್ಲಾ ಕೇಂದ್ರಗಳಲ್ಲಿ ಗಾಂಧಿ ಭವನ ನಿರ್ಮಾಣ ಯೋಜನೆಯು 23 ಜಿಲ್ಲೆಗಳಲ್ಲಿ ಪೂರ್ಣಗೊಂಡಿದ್ದು, ಬಾಕಿ ಇರುವ 7 ಜಿಲ್ಲೆಗಳಲ್ಲಿ ಮುಂದಿನ ಒಂದು ವರ್ಷದೊಳಗೆ ಪೂರ್ಣಗೊಳಿಸಲಾಗುತ್ತದೆ. ಯೋಜನೆಗೆ ಅವಶ್ಯವಿರುವ ಜಾಗ ಮತ್ತು ಅನುದಾನವನ್ನು ಕಲ್ಪಿಸಲಾಗುತ್ತದೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಭರವಸೆ ನೀಡಿದರು.

ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಜಯಂತಿ ಅಂಗವಾಗಿ ಕುಮಾರಕೃಪಾ ರಸ್ತೆಯಲ್ಲಿರುವ ಗಾಂಧಿ ಭವನದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ಟ್ರಸ್ಟ್ ಭಾನುವಾರ ಆಯೋಜಿಸಿದ್ದ ಗಾಂಧಿ ಜಯಂತಿ ಕಾರ್ಯಕ್ರಮದಲ್ಲಿ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ಪ್ರದಾನ ಮಾಡಿ ಅವರು ಮಾತನಾಡಿದರು.

ರಾಜ್ಯದಲ್ಲಿ ಮುಂದಿನ ದಿನಗಳಲ್ಲಿ ಖಾದಿ ಬಗ್ಗೆ ವಿಶೇಷ ಕಾರ್ಯಕ್ರಮ ರೂಪಿಸಲಾಗುತ್ತದೆ. ಗ್ರಾಮೀಣ ಕೈಗಾರಿಕೆಗಳು ಮತ್ತು ಖಾದಿ ಕೈಗಾರಿಕೆಗಳಿಗೆ ವಿಶೇಷ ಸವಲತ್ತು ಕಲ್ಪಿಸಲಾಗುತ್ತದೆ. ಮೌಲ್ಯಯುತ ಮಾರುಕಟ್ಟೆಯನ್ನು ಕಲ್ಪಿಸಿ ಖಾದಿ ಮತ್ತೊಮ್ಮೆ ಮುಂಚೂಣಿಗೆ ಬರುವಂತೆ ಮಾಡುವುದು ಮತ್ತು ದುಡಿಯುವ ವರ್ಗಕ್ಕೆ ಕೆಲಸ ನೀಡುವುದು ಸರ್ಕಾರದ ಆದ್ಯತೆಯಾಗಿದೆ ಎಂದರು.

ಸರ್ಕಾರವು ತಂತ್ರಜ್ಞಾನವನ್ನು ಹಳ್ಳಿಗಳಿಗೆ ತಲುಪಿಸುವ ಕೆಲಸ ಮಾಡುತ್ತಿದೆ. ಹಲವಾರು ಯೋಜನೆಗಳ ಸೌಲಭ್ಯಗಳು ಗ್ರಾಮ ಪಂಚಾಯಿತಿಯಲ್ಲಿಯೇ ದೊರೆಯುವಂತೆ ಮಾಡಲಾಗಿದೆ. ಅಮೃತ ಗ್ರಾಮ ಪಂಚಾಯಿತಿ ಹೆಸರಿನಲ್ಲಿ ಸ್ವಚ್ಛತೆ ಸೇರಿ ಇನ್ನಿತರ ಅಭಿವೃದ್ಧಿ ಮಾಡುವವರಿಗೆ ಹೆಚ್ಚಿನ ಅನುದಾನ ನೀಡಲಾಗುತ್ತಿದೆ. ಗಾಂಧಿ ಚಿಂತನೆ, ಗ್ರಾಮ ಸ್ವರಾಜ್ಯ ವಿಚಾರಗಳ ಯೋಜನೆ ಯಶಸ್ವಿಗೊಳಿಸಲು ಸ್ಥಳೀಯ ನಾಯಕರಿಗೆ ತರಬೇತಿ ನೀಡುವ ಅವಶ್ಯಕತೆ ಇದೆ ಎಂದರು.

ಗಾಂಧೀಜಿ ಬದುಕು ಎಲ್ಲದಕ್ಕೂ ಪರಿಹಾರ: ಮೋಹನ್‌ದಾಸ್ ಕರಮಚಂದ ಗಾಂಧಿಯಿಂದ ಮಹಾತ್ಮ ಆಗುವವರೆಗಿನ ಬದುಕು ವಿಶಿಷ್ಟವಾಗಿದೆ. ಸಾಮಾನ್ಯ ಕುಟುಂಬದಲ್ಲಿ ಜನಿಸಿ ಸಾಮಾನ್ಯ ಗುಣಗಳಿರುವ ವ್ಯಕ್ತಿ ಕ್ರಮೇಣ, ತಮ್ಮನ್ನು ತಾವೇ ಬದಲಾವಣೆಗೆ ಅರ್ಪಿಸಿಕೊಂಡು, ಮೌಲ್ಯಗಳನ್ನು ರೂಢಿಸಿಕೊಳ್ಳುತ್ತಾ ಸತ್ಯದ ಮಾರ್ಗದಿಂದ ಇತರರಿಗೆ ದಾರಿದೀಪವಾಗಿದ್ದಾರೆ. ಇಂತಹ ಅವರ ಬದುಕಿನಲ್ಲಿ ಎಲ್ಲದಕ್ಕೂ ಪರಿಹಾರವಿದೆ ಎಂದು ಹೇಳಿದರು.

ಮಾಜಿ ಸಚಿವ ಎಚ್.ಕೆ. ಪಾಟೀಲ್ ಮಾತನಾಡಿ, ಗ್ರಾಮೀಣ ಭಾರತ ಮತ್ತು ಗ್ರಾಮ ಸ್ವರಾಜ್ಯ ಗಾಂಧೀಜಿಯವರ ಕನಸಾಗಿತ್ತು. ಅದನ್ನು ಸಾಕಾರಗೊಳ್ಳುವುದಕ್ಕಾಗಿ ಪಂಚಾಯತ್ ರಾಜ್ ಇಲಾಖೆ ಮತ್ತು ಕಾನೂನುಗಳನ್ನು ಜಾರಿಗೊಳಿಸಲಾಗಿದೆ. ಗಾಂಧೀಜಿಯವರ ಕಲ್ಪನೆಯನ್ನು ಸಾಕಾರಗೊಳಿಸಲು ಆಡಳಿತಶಾಹಿ ಮತ್ತು ರಾಜಕೀಯ ಇಚ್ಛಾಶಕ್ತಿ ಪ್ರದರ್ಶಿಸಬೇಕಿದೆ ಎಂದು ಹೇಳಿದರು.

ಸಚಿವರಾದ ಗೋವಿಂದ ಕಾರಜೋಳ, ಆರಗ ಜ್ಞಾನೇಂದ್ರ, ಎಂಟಿಬಿ ನಾಗರಾಜ್, ಸಂಸದ ಎಲ್. ಹನುಮಂತಯ್ಯ, ಶಾಸಕ ಪಿ. ರಾಜೀವ್, ವಾರ್ತಾ ಇಲಾಖೆ ಆಯುಕ್ತ ಡಾ. ಪಿ.ಎಸ್. ಹರ್ಷ, ಸುಮಂಗಲಿ ಸೇವಾಶ್ರಮದ ಎಸ್.ಜಿ. ಸುಶೀಲಮ್ಮ ಉಪಸ್ಥಿತರಿದ್ದರು.



ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ಗಾಂಧಿ ಭವನದಲ್ಲಿ ಭಾನುವಾರ ಆಯೋಜಿಸಿದ್ದ ಗಾಂಧಿ ಜಯಂತಿ ಕಾರ್ಯಕ್ರಮದಲ್ಲಿ ಡಾ. ಸಿ.ಆರ್. ಚಂದ್ರಶೇಖರ್ ಅವರಿಗೆ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ಪ್ರದಾನ ಮಾಡಿದರು.

### ಪ್ರಶಸ್ತಿ ಹಣ ನಿಮ್ಹಾನ್ಸ್‌ಗೆ ದಾನ

ಕಾರ್ಯಕ್ರಮದಲ್ಲಿ ನೀಡಿರುವ ಗಾಂಧಿ ಸೇವಾ ಪ್ರಶಸ್ತಿ ಪುರಸ್ಕಾರದ 5 ಲಕ್ಷ ರೂ., ನನ್ನ ಪತ್ನಿ ಹೆಸರಿನಲ್ಲಿರುವ 1.9 ಕೋಟಿ ರೂ. ಹಾಗೂ ಮನೆಯನ್ನು ನಿಮ್ಹಾನ್ಸ್‌ಗೆ ದಾನವಾಗಿ ನೀಡಲಾಗುವುದು ಎಂದು ನಿಮ್ಹಾನ್ಸ್‌ನ ನಿವೃತ್ತ ವೈದ್ಯ ಡಾ. ಸಿ.ಆರ್. ಚಂದ್ರಶೇಖರ್ ತಿಳಿಸಿದರು. ಗಾಂಧಿ ಸೇವಾ ಪ್ರಶಸ್ತಿ ಪುರಸ್ಕಾರ ಸ್ವೀಕರಿಸಿ ಮಾತನಾಡಿದ ಅವರು, ದೇಶದಲ್ಲಿ ಇಂದಿಗೂ ಮಾನಸಿಕ ಆರೋಗ್ಯವನ್ನು ನಿರ್ಲಕ್ಷ್ಯ ಮಾಡಲಾಗುತ್ತಿದೆ. ಶಾಲಾ-ಕಾಲೇಜುಗಳಲ್ಲಿ ಮಾನಸಿಕ ಆರೋಗ್ಯಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಬಗೆಹರಿಸುವ ಕೆಲಸ ಮಾಡಬೇಕಿದೆ ಎಂದು ಹೇಳಿದರು.

### ಖಾದಿ ಜುಬ್ಬ, ಅಂಗಿ ಖರೀದಿಸಿದ ಸಿಎಂ

ಸಿಎಂ ಬಸವರಾಜ ಬೊಮ್ಮಾಯಿ ಅವರು ಕಾರ್ಯಕ್ರಮ ಬಳಿಕ ಖಾದಿ ಮಳಿಗೆಗೆ ಭೇಟಿ ನೀಡಿ ಖಾದಿ ವಸ್ತ್ರಗಳನ್ನು ಖರೀದಿಸಿದರು. 2 ಪ್ಯಾಂಟ್, 6 ಅಂಗಿಗಳು, ಒಂದು ಡಜನ್ ಕರವಸ್ತ್ರಗಳು ಹಾಗೂ 4 ಜುಬ್ಬಗಳನ್ನು ಖರೀದಿ ಮಾಡಿದರು.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ
VIJAYAVANI BENGALURU
ಸೋಮವಾರ 3 ಅಕ್ಟೋಬರ್ 2022
3 OCTOBER 2022

# ರಾಜಕಾರಣಿಗೆ ಸುಳ್ಳು ಹೇಳುವ ಅನಿವಾರ್ಯತೆ

## ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಬೇಸರ | ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪ್ರದಾನ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಮಹಾತ್ಮ ಗಾಂಧಿ ಅವರು ಸತ್ಯದ ಹಾದಿಯಲ್ಲಿ ಮುನ್ನಡೆದರು. ಆದರೆ, ಇಂದು ನಾವು ರಾಜಕಾರಣಿಗಳು ಸುಳ್ಳುಗಳನ್ನು ಹೇಳುವ ಅನಿವಾರ್ಯತೆಯನ್ನು ಸೃಷ್ಟಿಸಿಕೊಂಡಿದ್ದೇವೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಬೇಸರ ವ್ಯಕ್ತಪಡಿಸಿದ್ದಾರೆ.

ಗಾಂಧಿ ಸ್ಮಾರಕ ನಿಧಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಸಹಯೋಗದೊಂದಿಗೆ ಗಾಂಧಿ ಜಯಂತಿ ಅಂಗವಾಗಿ ಭಾನುವಾರ ಗಾಂಧಿ ಭವನದಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಮನೋರೋಗತಜ್ಞ ಡಾ.ಸಿ.ಆರ್. ಚಂದ್ರಶೇಖರ್ ಅವರಿಗೆ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ಪ್ರದಾನ ಮಾಡಿ ಮಾತನಾಡಿದರು.

ಗಾಂಧಿ ಅವರ ಸತ್ಯದ ಆದರ್ಶಗಳನ್ನು ಅನುಸರಿಸದೆ ರಾಜಕಾರಣಿಗಳಾದಿಯಾಗಿ ಇಂದು ನಾವು ಸುಳ್ಳುಗಳ ಸರಮಾಲೆಯಲ್ಲಿ ಬದುಕುತ್ತಿದ್ದೇವೆ. ನಮ್ಮದು ಸ್ವಾರ್ಥಕ್ಕಾಗಿ ಹೇಳುವ ಸುಳ್ಳಾಗಿದ್ದು, ರೂಢಿಗತವಾದ ಸುಳ್ಳುಗಳನ್ನು ಕಡಿಮೆ ಮಾಡಿದರೆ ಸತ್ಯದ ಹಾದಿಯಲ್ಲಿ ಸಾಗಬಹುದು. ಗಾಂಧಿ ಅವರ ಆತ್ಮಚರಿತ್ರೆ 'ಮೈ ಎಕ್ಸ್‌ಪೆರಿಮೆಂಟ್ಸ್ ವಿತ್ ಟ್ರುತ್' ಅನ್ನು ನಾನು ಎರಡು ಬಾರಿ ಓದಿದ್ದೇನೆ. ಮೊದಲ ಬಾರಿ ಓದಿದಾಗ ನನಗೆ ಅರ್ಥವಾಗಲಿಲ್ಲ. ಎರಡನೇ ಬಾರಿ ಓದಿದಾಗಲೇ ಅದು ಅರ್ಥವಾಗಿದ್ದು, ಆ ಕೃತಿಯನ್ನು ಓದಿದ ನಂತರ ನಾವು ಸುಳ್ಳುಗಳನ್ನು ಹೇಳುವುದರಿಂದ 'ಮೈ ಎಕ್ಸ್‌ಪೆರಿಮೆಂಟ್ಸ್ ವಿತ್ ಲೈ' ಆಗುತ್ತದೆ ಎಂದು ಸಿಎಂ ವಿವರಿಸಿದರು.

### ಮಕ್ಕಳಿಗೆ ಮಾನಸಿಕ ಕೌನ್ಸೆಲಿಂಗ್ ಅಗತ್ಯ

ಪ್ರಶಸ್ತಿ ಸ್ವೀಕರಿಸಿ ಮಾತನಾಡಿದ ಡಾ.ಸಿ.ಆರ್.ಚಂದ್ರಶೇಖರ್, 'ಮಾನಸಿಕ ಕ್ಷೇತ್ರವು ಅತ್ಯಂತ ನಿರ್ಲಕ್ಷ್ಯಕ್ಕೆ ಒಳಗಾಗಿದೆ. ಮಾನಸಿಕ ಒತ್ತಡದಿಂದ ಅನೇಕ ಕಾಯಿಲೆಗಳಿಗೆ ತುತ್ತಾಗುತ್ತಿದ್ದೇವೆ. ಶಾಲಾ-ಕಾಲೇಜು ಹಂತದಲ್ಲಿ ಮನಸ್ಸಿನ ಆರೋಗ್ಯದ ಪಠ್ಯ ಅಳವಡಿಸುವ ಮೂಲಕ ಮಕ್ಕಳಿಗೆ ಕೌನ್ಸೆಲಿಂಗ್ ಅಗತ್ಯವಿದೆ' ಎಂದರು.

ಪುಸ್ತಕ ಬಿಡುಗಡೆ: ಗಾಂಧಿ ಅನುಯಾಯಿ, ಕಡಿದಾಳ್ ಮಂಜಪ್ಪ, ಹುತಾತ್ಮ ಮೈಲಾರ ಮಹಾದೇವ, ವಿದ್ಯಾರ್ಥಿಗಳ ಕವನಗಳಲ್ಲಿ ಮೂಡಿದ ಗಾಂಧಿ ಎಂಬ ಕೃತಿ ಹಾಗೂ ಗಾಂಧಿಭವನ ಪ್ರಕಾಶನ ಹೊರತರಲಾದ 5 ಪುಸ್ತಕ ಹಾಗೂ ಮನೋರೋಗ ತಜ್ಞ ಡಾ.ಸಿ.ಆರ್. ಚಂದ್ರಶೇಖರ್ ಅವರ ಸ್ಕಿಲ್ಸ್ ಫಾರ್ ಸ್ಟೂಡೆಂಟ್ಸ್ ಪುಸ್ತಕಗಳನ್ನು ಬಿಡುಗಡೆ ಮಾಡಲಾಯಿತು.

ಲೇಖಕಿ ಡಾ.ಕೆ.ಆರ್. ಸಂಧ್ಯಾರೆಡ್ಡಿಗೆ 'ಜಯಶ್ರೀ ಟ್ರಸ್ಟ್‌ನ ಪ್ರಶಸ್ತಿ' ನೀಡಲಾಯಿತು. ಮರಾಠ ರೆಜಿಮೆಂಟ್‌ನ ಹವಾಲ್ದಾರ್ ಎಂ.ಎನ್. ರವಿಕುಮಾರ್ ಹಾಗೂ ಗದಗದ ವೀರೇಶ್ವರ ಪುಣ್ಯಾಶ್ರಮದ ಕಲ್ಲಯ್ಯಜ್ಜ ಅವರನ್ನು ಗೌರವಿಸಲಾಯಿತು. ಸಚಿವರಾದ ಗೋವಿಂದ ಕಾರಜೋಳ, ಆರಗ ಜ್ಞಾನೇಂದ್ರ, ಎಂ.ಟಿ.ಬಿ. ನಾಗರಾಜ್, ಸುಪ್ರೀಂ ಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ ಚಂದ್ರಶೇಖರ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ, ರಾಜ್ಯಸಭಾ ಸದಸ್ಯ ಎಲ್. ಹನುಮಂತಯ್ಯ, ಶಾಸಕರಾದ ಪಿ.ರಾಜೀವ್, ವಿಜಯ ಕರ್ನಾಟಕ ಸಂಪಾದಕ ಸುದರ್ಶನ ಚನ್ನಂಗಿಹಳ್ಳಿ ಮತ್ತಿತರರಿದ್ದರು.



ಗಾಂಧಿ ಭವನದಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಮನೋರೋಗತಜ್ಞ ಡಾ.ಸಿ.ಆರ್. ಚಂದ್ರಶೇಖರ್ ಅವರಿಗೆ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ಪ್ರದಾನ ಮಾಡಲಾಯಿತು. ಸಿಎಂ ಬೊಮ್ಮಾಯಿ, ಆರಗ ಜ್ಞಾನೇಂದ್ರ, ವೂಡೇ ಪಿ.ಕೃಷ್ಣ, ಹರ್ಷ ಮತ್ತಿತರರು ಉಪಸ್ಥಿತರಿದ್ದರು.

### ನಿಮ್ಹಾನ್ಸ್‌ಗೆ ವಿಲ್ ಮಾಡಿದ್ದೇನೆ

ಪ್ರಶಸ್ತಿಯೊಂದಿಗೆ ಸ್ವೀಕರಿಸಿದ 5 ಲಕ್ಷ ರೂ. ಮೊತ್ತದ ಚೆಕ್ ಅನ್ನು ನಿಮ್ಹಾನ್ಸ್ ಆಸ್ಪತ್ರೆ ಅಭಿವೃದ್ಧಿಗೆ ನೀಡುವುದಾಗಿ ಡಾ.ಚಂದ್ರಶೇಖರ್ ಘೋಷಿಸಿದರು. ನಾನು ನನ್ನ ಮನೆ ಮತ್ತಿತರ ಆಸ್ತಿಯನ್ನು ನನ್ನ ಪತ್ನಿ ಹೆಸರಿನಲ್ಲಿ ನಿಮ್ಹಾನ್ಸ್‌ಗೆ ಅರ್ಪಿಸುತ್ತಿದ್ದೇನೆ. ಈಗಾಗಲೆ ಅದರ ಹೆಸರಿಗೆ ವಿಲ್ ಮಾಡಿದ್ದೇನೆ ಎಂದು ಡಾ.ಚಂದ್ರಶೇಖರ್ ತಿಳಿಸಿದರು.

6 ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಇಲಾಖೆಯನ್ನು ನಾನೇ ವಹಿಸಿರುವೆ. ಈ ಇಲಾಖೆಗೆ ಸಂಬಂಧಿಸಿದಂತೆ ಯಾರೇ ಆದರೂ ಸಲಹೆ-ಸೂಚನೆ ನೀಡಿದರೆ ಅವುಗಳನ್ನು ಪರಿಶೀಲಿಸಿ ಕಾರ್ಯರೂಪಕ್ಕೆ ಇಳಿಸಲು ಸಿದ್ಧ.

| ಬಸವರಾಜ ಬೊಮ್ಮಾಯಿ ಸಿಎಂ

### 7 ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಾಣ

ರಾಜ್ಯದ ಏಳು ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಾಣ ಬಾಕಿಯಿದ್ದು, ಶೀಘ್ರವೇ ಭವನ ನಿರ್ಮಾಣಕ್ಕೆ ಕ್ರಮ ಕೈಗೊಳ್ಳಲಾಗುವುದು. 23 ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಿಸಲಾಗಿದೆ. ಜಾಗದ ಸಮಸ್ಯೆಯ ಕಾರಣಕ್ಕೆ ಕೆಲವು ಜಿಲ್ಲೆಗಳಲ್ಲಿ ಭವನ ನಿರ್ಮಾಣ ನನೆಗುದಿಗೆ ಬಿದ್ದಿದ್ದು, ಈ ಸಮಸ್ಯೆಯನ್ನು ಬಗೆಹರಿಸಲಾಗುವುದು ಎಂದು ಬಸವರಾಜ ಬೊಮ್ಮಾಯಿ ತಿಳಿಸಿದರು.



ಬೆಂಗಳೂರು ವಿವಿಯಲ್ಲಿ ಭಾನುವಾರ ಹಮ್ಮಿಕೊಳ್ಳಲಾಗಿದ್ದ ಗಾಂಧಿ ಜಯಂತಿ ಕಾರ್ಯಕ್ರಮದಲ್ಲಿ ಮಾಜಿ ಅಡ್ವೊಕೇಟ್ ಜನರಲ್ ಪ್ರೊ. ರವಿವರ್ಮಕುಮಾರ್, ಕುಲಪತಿ ಪ್ರೊ. ಎಸ್.ಎಂ. ಜಯಕರ, ಲೇಖಕ ಮಂಗ್ಳೂರ ವಿಜಯ, ಪ್ರೊ. ಪ್ರಭಾಕರ್, ಗಾಂಧಿ ಅಧ್ಯಯನ ಕೇಂದ್ರದ ನಿರ್ದೇಶಕ ಡಾ. ನಟರಾಜ್ ಹುಳಿಯಾರ್ ಮತ್ತಿತರರು ಭಾಗವಹಿಸಿದ್ದರು.

# ಸರಳತೆ, ಪ್ರಾಮಾಣಿಕತೆಗೆ ಮೇಲ್ಪಂಕ್ತಿ ಶಾಸ್ತ್ರಿ ಜೀವನ

ಬೆಂಗಳೂರು: ಮಹಾತ್ಮ ಗಾಂಧಿ ಅವರ ತತ್ವ, ವಿಚಾರಗಳು ಸ್ವಾತಂತ್ರ್ಯ ಹೋರಾಟಕ್ಕೆ ಮಾತ್ರವಲ್ಲ, ದೇಶದ ಸಾಮಾಜಿಕ, ಆರ್ಥಿಕ ಜೀವನದ ಮೇಲೂ ಗಾಢ ಪ್ರಭಾವ ಬೀರಿದೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ವ್ಯಾಖ್ಯಾನಿಸಿದ್ದಾರೆ.

ಮಹಾತ್ಮ ಗಾಂಧಿ ಮತ್ತು ಮಾಜಿ ಪ್ರಧಾನಿ ಲಾಲ್ ಬಹದ್ದೂರ್ ಶಾಸ್ತ್ರಿ ಜಯಂತಿ ನಿಮಿತ್ತ ವಿಧಾನಸೌಧ ಆವರಣದಲ್ಲಿರುವ ಮಹನೀಯರಿಬ್ಬರ ಪ್ರತಿಮೆಗೆ ಭಾನುವಾರ ಮಾಲಾರ್ಪಣೆ, ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದ ನಂತರ ಸುದ್ದಿಗಾರರ ಜತೆಗೆ ಮಾತನಾಡಿದರು. ಗಾಂಧೀಜಿ ನೇತೃತ್ವ ವಹಿಸಿದ ಬಳಿಕ ಸ್ವಾತಂತ್ರ್ಯ ಹೋರಾಟಕ್ಕೆ ದಿಕ್ಸೂಚಿ ದೊರೆಯಿತು. ಸತ್ಯ, ಅಹಿಂಸೆ ತತ್ವವೆಂಬ ಪ್ರಬಲ ಅಸ್ತ್ರಗಳು ಬ್ರಿಟಿಷರು ಭಾರತ ಬಿಟ್ಟು ತೊಲಗುವಂತೆ ಮಾಡಿತು. ಸಮಾನತೆ, ತಳಸ್ತರದ ಜನರ ಬದುಕು ಸುಧಾರಣೆಗೆ ಹಂಬಲಿಸುವ ಗ್ರಾಮ ಸ್ವರಾಜ್, ಸಮೂಹ ಉತ್ಪಾದನೆಗೆ ಬದಲು ಸಾಮೂಹಿಕ ಉತ್ಪಾದನೆ ಪ್ರತಿಪಾದಿಸಿದರು. ಇಡೀ ದೇಶಕ್ಕೆ ಗಾಂಧಿ ಪ್ರೇರಣಾ ಶಕ್ತಿಯಾಗಿದ್ದಾರೆ ಎಂದು ಸಿಎಂ ಸ್ಮರಿಸಿದರು.

### ರಾಜಿಯಾಗದ ಬದುಕು

ಬಡತನದಿಂದ ಮೇಲೆ ಬಂದ ಲಾಲ್ ಬಹದ್ದೂರ್ ಶಾಸ್ತ್ರಿ ಕಠಿಣ ಜೀವನ ಸವೆಸಿದರೂ ಎಂದಿಗೂ ರಾಜಿ ಮಾಡಿಕೊಳ್ಳಲಿಲ್ಲ. ಸರಳತೆ, ಪ್ರಾಮಾಣಿಕತೆಗೆ ಮೇಲ್ಪಂಕ್ತಿ ಎಂದು ಸಿಎಂ ಗುಣಗಾನ ಮಾಡಿದರು.

ಪ್ರಧಾನಿಯಾಗಿ ಶಾಸ್ತ್ರಿ ಅವರ ಆಳ್ವಿಕೆ ಅಲ್ಪಾವಧಿಯೇ ಆಗಿದ್ದರೂ ಜನಮಾನಸದಲ್ಲಿ ಚಿರಸ್ಥಾಯಿಯಾಗಿದ್ದಾರೆ. ದಕ್ಷ, ಸಮರ್ಥ ಆಡಳಿತ ಜತೆಗೆ ಭಾರತ-ಪಾಕಿಸ್ತಾನ ಯುದ್ಧದ ಸಂದರ್ಭದಲ್ಲಿ ಭಾರತದ ಗಡಿಗೆ ಹೋಗಿ ಸೈನಿಕರಲ್ಲಿ ಕೆಚ್ಚು ತುಂಬಿದರು. ದೇಶ ಆಹಾರ ಉತ್ಪಾದನೆಯಲ್ಲಿ ಸ್ವಾವಲಂಬಿಯಾಗಲೆಂದು ಹಸಿರು ಕ್ರಾಂತಿಗೆ ಬುನಾದಿ ಹಾಕಿದರು. ದೇಶ ಕಾಯುವ ಸೈನಿಕರು ಹಾಗೂ ದೇಶಕ್ಕೆ ಅನ್ನ ಹಾಕುವವರಿಗಾಗಿ 'ಜೈ ಜವಾನ್ ಜೈ ಕಿಸಾನ್' ಘೋಷಣೆ ಮೂಲಕ ಗೌರವ ಹೆಚ್ಚಿಸಿದರು ಎಂದು ಬೊಮ್ಮಾಯಿ ಹೇಳಿದರು.



ಮಾಜಿ ಪ್ರಧಾನಿ ಲಾಲ್ ಬಹದ್ದೂರ್ ಶಾಸ್ತ್ರಿ ಜಯಂತಿ ಅಂಗವಾಗಿ ವಿಧಾನಸೌಧ ಆವರಣದಲ್ಲಿ ಅವರ ಭಾವಚಿತ್ರಕ್ಕೆ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ಭಾನುವಾರ ಪುಷ್ಪನಮನ ಸಲ್ಲಿಸಿದರು. ಜಲಸಂಪನ್ಮೂಲ ಸಚಿವ ಗೋವಿಂದ ಕಾರಜೋಳ, ಪೌರಾಡಳಿತ ಸಚಿವ ಎಂಟಿಬಿ ನಾಗರಾಜ್ ಇತರರು ಉಪಸ್ಥಿತರಿದ್ದರು.

ಪ್ರಜಾ  ಪ್ರಗತಿ

Sep 19, 2022

# ವಿವೇಕವಂತರಾದಾಗ ಮಾತ್ರ ವಿದ್ಯಾರ್ಥಿ ಜೀವನ ಯಶಸ್ಸು

■ ಪ್ರಜಾಪ್ರಗತಿ.ಕಾಂ

ತುಮಕೂರು: ಇಂದು ನಾವು ವಿವೇಕ ಶೂನ್ಯರಾಗಿದ್ದೇವೆ, ಮೌಢ್ಯತೆಯನ್ನು ಬೆಳೆಸಿಕೊಂಡಿದ್ದೇವೆ. ಆದ್ದರಿಂದ ನಾವು ವಿದ್ಯಾವಂತರು, ವಿವೇಕವಂತರೂ ಆಗಬೇಕು. ಆಗಲೇ ವಿದ್ಯಾರ್ಥಿಜೀವನವು ಯಶಸ್ವಿಯಾಗಲು ಸಾಧ್ಯ ಎಂದು ವಿವಿ ಕಲಾ ಕಾಲೇಜಿನ ಪ್ರಾಂಶುಪಾಲ ಹೊನ್ನಗಾನಹಳ್ಳಿ ಕರಿಯಣ್ಣ ಅಭಿಪ್ರಾಯಪಟ್ಟರು.

ವಾರ್ಷಿಕ ಹಬ್ಬವನ್ನು ಕಲಾ ಸಂಭ್ರಮ ಎಂಬ ಹೆಸರಿನಿಂದ ಶೇಷಾದ್ರಿಪುರಂ ಕಾಲೇಜು ಹಮ್ಮಿಕೊಂಡಿತ್ತು. ಈ ಸಮಾರಂಭದಲ್ಲಿ ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರವನ್ನು ನೀಡಿ, ಕಾರ್ಯಕ್ರಮದ ಮುಖ್ಯ ಅತಿಥಿಗಳಾದ

ಶ್ರೀ ಹೊನ್ನಗಾನಹಳ್ಳಿ ಕರಿಯಣ್ಣ, ತುಮಕೂರು ವಿಶ್ವವಿದ್ಯಾಲಯ ಕಲಾ ಕಾಲೇಜು ಇವರು ಮಾತನಾಡಿ, ಜನಪದ ಹಾಡುಗಳ ಮೂಲಕ ನಮ್ಮ ಸಂಸ್ಕೃತಿಯನ್ನು ನೆನೆಯುತ್ತ ವಿದ್ಯಾರ್ಥಿಗಳನ್ನು ಕುರಿತು ಗಾಂಧಿ ತತ್ವಗಳನ್ನು ಕುರಿತು ಮಾತನಾಡುತ್ತ ಅಹಿಂಸಾತ್ಮಕ ಸಮಾಜದ ನಿರ್ಮಾಣ ಹಾಗೂ ಸಮುದಾಯ ಸಮಾಜದಕಲ್ಪನೆ ಇವುಗಳು ಅತ್ಯಂತ ಮಹತ್ವಪೂರ್ಣವಾಗಿದೆ. ಇವುಗಳನ್ನು ಅರಿತು ನಮ್ಮ ಬದುಕಿನಲ್ಲಿಆದರ್ಶವನ್ನು ರೂಪಿಸಿಕೊಂಡಾಗಲೇ



ಪರಿಪೂರ್ಣ ವ್ಯಕ್ತಿತ್ವ ಹಾಗೂ ಪರಿಪೂರ್ಣ ಸಮಾಜದ ನಿರ್ಮಾಣಕ್ಕೆ ಸಹಾಯಕವಾಗುವುದು ಎಂದು ತಿಳಿಸಿದರು.

ಈ ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ನಾಡೋಜಡಾ|| ವೂಡೇ ಪಿ. ಕೃಷ್ಣರವರು ಮಾತನಾಡುತ್ತ ಶೇಷಾದ್ರಿಪುರಂಕಾಲೇಜಿನ ಪ್ರಗತಿ, ಅಭಿವೃದ್ಧಿ ಹಾಗೂ ವೇಗ ಇವುಗಳನ್ನು ನೋಡಿ ನನಗೆ ಹೆಮ್ಮೆ ಆಗಿದೆ. ಐದು ವರ್ಷಗಳಲ್ಲಿ ಈ ಕಾಲೇಜು ತುಮಕೂರಿನಲ್ಲಿ ಅತ್ಯುತ್ತಮವಾದ ಕಾಲೇಜು ಎಂದುಗುರುತಿಸಲ್ಪಟ್ಟಿದೆ. ಪಠ್ಯ ಹಾಗೂ ಪಠ್ಯೇತರ ಚಟುವಟಿಕೆಗಳಲ್ಲೂ ವಿದ್ಯಾರ್ಥಿಗಳು ಭಾಗವಹಿಸಬೇಕು. ಈ ಸಂಸ್ಥೆಯಲ್ಲಿ ವಿದ್ಯಾರ್ಥಿಗಳು ಜ್ಞಾನವನ್ನು ಪಡೆದು ಸಮಾಜಕ್ಕೆ ಆಸ್ತಿಯಾಗಬೇಕು ಮತ್ತು ಸಮಾಜದ ಮಾರ್ಗದರ್ಶಿಗಳಾಗಬೇಕು ಎಂದು ತಿಳಿಸಿದರು.

ಮುಖ್ಯ ಅತಿಥಿಗಳ ಮಾತನ್ನೇ ಅನುಮೋದಿಸುತ್ತಿವರುಹೂಡಗಾಂಧೀಜಿಯವರ ತತ್ವಗಳನ್ನು ನಮ್ಮ ಬದುಕಿನಲ್ಲಿ ಅಳವಡಿಸಿಕೊಂಡಾಗಲೇ ಗಾಂಧಿಯವರತ್ಯಾಗ, ಬಲಿದಾನಗಳು ಸಾರ್ಥಕವಾಗುತ್ತವೆ ಎಂದು ತಿಳಿಸಿದರು.

ಈ ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಧರ್ಮದರ್ಶಿಗಳಾದ ಕೆ.ಕೃಷ್ಣಸ್ವಾಮಿ, ಹೆಂಜಾರಪ್ಪ, ಪಿ.ಯು.ಕಾಲೇಜಿನ ಪ್ರಾಂಶುಪಾಲರಾದಪ್ರೊ.ಬಿ.ವಿ.ಬಸವರಾಜು, ಕಾಲೇಜಿನ ಪ್ರಾಂಶುಪಾಲರಾದಡಾ|| ಜಗದೀಶಜಿ.ಟಿ. ಹಾಗೂ ಕಾಲೇಜಿನ ಅಧ್ಯಾಪಕರು, ವಿದ್ಯಾರ್ಥಿಗಳು, ಸಿಬ್ಬಂದಿಗಳು ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ | 16 ಸೆಪ್ಟೆಂಬರ್ 2022 ಶುಕ್ರವಾರ

# ವಿನಯದ ಪ್ರತಿರೂಪ ರಾಜಶೇಖರನ್

**ಗಣ್ಯರ ಬಣ್ಣನೆ**

ಬೆಂಗಳೂರು: ಸರಳ ಸಜ್ಜನಿಕೆಯ ರಾಜಕಾರಣಿ, ಅಪ್ಪಟ ಗಾಂಧೀವಾದಿ.. ತಾನೊಬ್ಬ ನಿಜಲಿಂಗಪ್ಪನವರ ಅಳಿಯ ಎಂದು ಯಾವತ್ತೂ ಬೀಗಿ ನಡೆದವರಲ್ಲ, ಬದಲಾಗಿ ವಿನಯದಿಂದ ಬಾಗಿ ನಡೆದವರು.. ಗಾಂಧಿ ತತ್ವ ಪ್ರಚಾರಕ.. ಗಾಂಧಿ ಭವನ ಕಸ್ತೂರ್‌ಬಾ ಭವನಗಳ ರೂವಾರಿ... ಹೀಗೆಂದು ಕೇಂದ್ರದ ಮಾಜಿ ಸಚಿವ ದಿ.ಎಂ.ವಿ. ರಾಜಶೇಖರನ್ ಅವರ ಜೀವನ-ಸಾಧನೆಗಳ ಕುರಿತು ವೇದಿಕೆಯ ಮೇಲಿದ್ದ ಗಣ್ಯರೆಲ್ಲ ಗುಣಗಾನ ಮಾಡಿದರು.

ಎಂ.ವಿ.ಆರ್.ಫೌಂಡೇಶನ್ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಯುಕ್ತ ಆಶ್ರಯದಲ್ಲಿ ಗಾಂಧಿ ಭವನದಲ್ಲಿ ಹಮ್ಮಿಕೊಳ್ಳಲಾಗಿದ್ದ ಡಾ.ಎಂ.ವಿ.ರಾಜಶೇಖರನ್ ಜನ್ಮ ದಿನಾಚರಣೆಯ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಮಾತನಾಡಿದ ವಿವಿಧ ಗಣ್ಯರು ಮತ್ತು ಎಂ.ವಿ.ಆರ್. ಅವರ ಒಡನಾಡಿಗಳು ಎಂವಿಆರ್ ಜೊತೆಗಿನ ಸವಿನೆನಪಿನ ಬುತ್ತಿಯನ್ನು ಬಿಚ್ಚಿಟ್ಟರು.

ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ಮಾಜಿ ಸಂಸದ ಡಾ.ಹೆಚ್.ಹನುಮಂತಪ್ಪ, ಗಾಂಧೀಜಿಯವರಿಂದ ಮೆಚ್ಚುಗೆ ಗಳಿಸಿದ್ದ ಎಂ.ವಿ.ರಾಜಶೇಖರನ್ ತಮ್ಮ ಜೀವಿತಾವಧಿಯವರೆಗೂ ರಾಜಕೀಯಲ್ಲಿ ಶುದ್ಧಹಸ್ತರೆಂದೇ ಪ್ರತೀತಿ ಹೊಂದಿದ್ದರು. ಆ ದಿನಗಳಲ್ಲೇ 37 ದೇಶಗಳನ್ನು ಸುತ್ತಿ ಬಂದಿದ್ದುದರ ಫಲವಾಗಿ ನಮ್ಮ ದೇಶಕ್ಕೆ ಮಾರ್ಗದರ್ಶನ ನೀಡುತ್ತಿದ್ದರು ಎಂದರು

ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡಿದ ವೂಡೆ ಪಿ.ಕೃಷ್ಣ ಅವರು, ರಾಜಶೇಖರನ್ ಅವರು ಗ್ರಾಮೀಣಾಭಿವೃದ್ಧಿಗೆ ಹೆಚ್ಚು ಒತ್ತು ನೀಡುತ್ತಿದ್ದರು. ಗ್ರಾಮೀಣ ಭಾರತವೇ ನಿಜವಾದ ಭಾರತ. ಗ್ರಾಮಗಳ ಅಭಿವೃದ್ಧಿಯಾದರೆ ದೇಶದ ಅಭಿವೃದ್ಧಿ ಯಾದಂತೆ ಎಂಬ ಮನೋಭಾವ ಹೊಂದಿದ್ದರು ಎಂದು ಸ್ಮರಿಸಿಕೊಂಡರು. ಏಷ್ಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಅಧ್ಯಕ್ಷ ಹೆಚ್.ಶಿವಲಿಂಗಯ್ಯ, ಎಂ.ವಿ.ಆರ್.ಫೌಂಡೇಶನ್ ಅಧ್ಯಕ್ಷ ಮಂಜುನಾಥ್ ಬಿಜ್ಜಳ್ಳಿ, ಕಾರ್ಯದರ್ಶಿ ಸಂಧ್ಯಾ ಪ್ರದೀಪ್, ಕನಾಟಕ ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಉಪಸ್ಥಿತರಿದ್ದರು. ಕೊಪ್ಪಳ ಒಎಫ್‌ಹೆಚ್ ಸಿಇಒ ಬಸಯ್ಯ ಹಿರೇಮಠ, ಸಾವಯವ ಕೃಷಿ ತಜ್ಞ ಮತ್ತು ಪ್ರಗತಿಪರ ರೈತ ನವೀನ್‌ಕುಮಾರ್ ಅವರು ಗೋವು ಆಧಾರಿತ ಕೃಷಿ ಬಗ್ಗೆ ಉಪನ್ಯಾಸ ನೀಡಿದರು.



ಕೇಂದ್ರದ ಮಾಜಿ ಸಚಿವ ದಿ. ಎಂ.ವಿ. ರಾಜಶೇಖರನ್ ಅವರ ಜನ್ಮದಿನದ ಅಂಗವಾಗಿ ಏರ್ಪಡಿಸಿದ್ದ ದತ್ತಿ ಉಪನ್ಯಾಸದ ವೇಳೆ ಅವರ ಭಾವಚಿತ್ರಕ್ಕೆ ಮಾಜಿ ಸಂಸದ ಎಚ್. ಹನುಮಂತಪ್ಪ, ಗಾಂಧಿ ಪ್ರತಿಷ್ಠಾನದ ವೂಡೆ ಪಿ. ಕೃಷ್ಣ, ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಎಂವಿ. ಫೌಂಡೇಷನ್‌ನ ಸಂಧ್ಯಾ ಪ್ರದೀಪ್ ಕುಮಾರ್ ಮತ್ತಿತರರು ಪುಷ್ಪಾರ್ಚನೆ ಮಾಡಿದರು.

ಪ್ರಜಾವಾಣಿ

ಗುರುವಾರ • ಸೆಪ್ಟೆಂಬರ್ 15, 2022

# ಗೋಡ್ಸೆ ಚಿತ್ರ ಪ್ರದರ್ಶನ: ಬೊಮ್ಮಾಯಿಗೆ ಪತ್ರ

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಶಿವಮೊಗ್ಗದಲ್ಲಿ ಗಣೇಶ ಮೂರ್ತಿ ವಿಸರ್ಜನೆ ವೇಳೆ ಹಿಂದೂ ಮಹಾಸಭಾದ ಕಾರ್ಯಕರ್ತರು ನಾಥೂರಾಮ್ ಗೋಡ್ಸೆ ಭಾವಚಿತ್ರ ಪ್ರದರ್ಶಿಸಿರುವುದು ಆತಂಕಕಾರಿ ಘಟನೆ. ತಪ್ಪೆಸಗಿದವರ ವಿರುದ್ಧ ಕ್ರಮ ಕೈಗೊಳ್ಳಬೇಕು' ಎಂದು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಅವರು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರಿಗೆ ಪತ್ರ ಬರೆದಿದ್ದಾರೆ.

'ಗಾಂಧೀಜಿ ಹತ್ಯೆ ವಿಜೃಂಭಿಸುವುದು ದೇಶಕ್ಕೆ ಅಗೌರವ ತೋರಿಸಿದಂತಾಗುತ್ತದೆ. ಶಿವಮೊಗ್ಗದ ಅಮೀರ್ ಅಹಮದ್ ವೃತ್ತ ಹಾಗೂ ಬಸ್ ನಿಲ್ದಾಣದ ಎದುರು ಅಶೋಕ ಸ್ತಂಭದ ಮೇಲಿನ ರಾಷ್ಟ್ರ ಲಾಂಛನದ ಮೇಲೆ ಭಗವಾಧ್ವಜ ಹಾರಾಡಿಸಿದ ಘಟನೆಯೂ ನಡೆದಿದೆ. ಈ ಎರಡೂ ಘಟನೆಗಳು ಕರ್ನಾಟಕ ಗಾಂಧಿ ಸ್ಮಾರಕ ನಿಧಿಗೆ ಆತಂಕ ತಂದಿವೆ' ಎಂದಿದ್ದಾರೆ.

'ಬೆಂಗಳೂರಿನ ಗಾಂಧಿ ಭವನದ ಆವರಣದಲ್ಲಿ ಮೌನ ಪ್ರತಿಭಟನೆ ಮಾಡುವ ಬಗ್ಗೆ ಆಲೋಚಿಸಿದ್ದೆವು. ಆದರೆ, ರಾಜ್ಯದಲ್ಲಿ ನಡೆಯುತ್ತಿರುವ ಮತೀಯ ಸಂಘರ್ಷದ ಸಂದರ್ಭದಲ್ಲಿ ಈ ವಿಷಯವನ್ನು ಮತ್ತೆ ಮುನ್ನೆಲೆಗೆ ತಂದು ಸೌಹಾರ್ದ ವಾತಾವರಣವನ್ನು ಹದಗೆಡುವಂತೆ ಮಾಡುವುದು ಸರಿಯಲ್ಲ ಎಂದು ತೀರ್ಮಾನಿಸಿ ಪ್ರತಿಭಟನೆ ವಿಷಯ ಕೈಬಿಟ್ಟಿದ್ದೇವೆ. ಮುಂದಿನ ದಿನಗಳಲ್ಲಿ ಈ ರೀತಿಯ ಘಟನೆಗಳು ನಡೆಯದಂತೆ ಕಾನೂನು ಕ್ರಮ ಜರುಗಿಸಬೇಕು' ಎಂದು ಒತ್ತಾಯಿಸಿದ್ದಾರೆ.

'ಹಿಂದೂ ಮಹಾಸಭಾ ಸಂಘಟನೆಯು ತನ್ನ ವಿಚಾರಗಳನ್ನು ಸಾರ್ವಜನಿಕವಾಗಿ ಪ್ರಚಾರಪಡಿಸಲು ನಮ್ಮ ಆಕ್ಷೇಪ ಇಲ್ಲ. ಆದರೆ, ರಾಷ್ಟ್ರಪಿತ ಎಂದು ಇಡೀ ದೇಶದ ಜನ ಒಪ್ಪಿಕೊಂಡಿರುವಾಗ ಅವರೆಲ್ಲರ ಮನಸಿಗೆ ಆಘಾತ ಆಗುವ ಕೃತ್ಯ ನಡೆಸುವುದು ಸರಿಯಲ್ಲ. ನಮ್ಮ ರಾಷ್ಟ್ರ ಧ್ವಜ ಮತ್ತು ರಾಷ್ಟ್ರೀಯ ಲಾಂಛನಗಳ ಸಂಹಿತೆಗೆ ಅಪಚಾರ ಆಗುವಂತಹ ನಡವಳಿಕೆಗಳೂ ಸಂವಿಧಾನಬಾಹಿರ' ಎಂದಿದ್ದಾರೆ.

'ರಾಷ್ಟ್ರೀಯ ಭಾವನೆಗಳಿಗೆ ಧಕ್ಕೆ ತರುವಂತೆ ಉದ್ದೇಶಪೂರ್ವಕವಾಗಿ ನಡೆದುಕೊಂಡಿರುವುದು ಸರಿಯಾದ ನಡವಳಿಕೆ ಅಲ್ಲ. ನಮ್ಮ ಸದುದ್ದೇಶದ ಭಾವನೆಯನ್ನು ಹಾಗೂ ನಮ್ಮ ಪ್ರತಿಭಟನಾತ್ಮಕ ನಿಲುವನ್ನು ನೀವು ಗೌರವಿಸಿ ತಪ್ಪು ಎಸಗಿರುವ ಸಂಘಟನೆ ಅಥವಾ ವ್ಯಕ್ತಿಗಳ ವಿರುದ್ಧ ಕ್ರಮ ಕೈಗೊಳ್ಳಬೇಕು' ಎಂದು ಮನವಿ ಮಾಡಿದ್ದಾರೆ.

ಈ ಸಂಜೆ

Sep 15, 2022



ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಎಂ.ವಿ.ಆರ್. ಫೌಂಡೇಷನ್ ಸಂಯುಕ್ತಾಶ್ರಯದಲ್ಲಿ ಗಾಂಧೀಭವನದಲ್ಲಿಂದು ಹಮ್ಮಿಕೊಂಡಿದ್ದ ಎಂ.ವಿ.ರಾಜಶೇಖರನ್ ಜನ್ಮದಿನಾಚರಣೆ ದತ್ತಿ ಉಪನ್ಯಾಸ ಹಾಗೂ ಗೋವು ಆಧಾರಿತ ಕೃಷಿ ಕುರಿತ ವಿಚಾರ ಸಂಕಿರಣವನ್ನು ನಾಡೋಜ ಡಾ.ವೂಡೇಪಿ ಕೃಷ್ಣ ಉದ್ಘಾಟಿಸಿದರು. ರಾಜ್ಯಸಭಾ ಮಾಜಿ ಸದಸ್ಯ ಡಾ.ಎಚ್.ಹನುಮಂತಪ್ಪ, ಬಸಯ್ಯ ಹಿರೇಮಠ್, ಇಂದಿರಾ ಕೃಷ್ಣಪ್ಪ ಮತ್ತಿತರರು ಉಪಸ್ಥಿತರಿದ್ದರು.

VIJAYAVANI » BENGALURU

ಸೋಮವಾರ 5 ಸೆಪ್ಟೆಂಬರ್ 2022
5 SEPTEMBER 2022




ಪ್ರೆಸ್‌ಕ್ಲಬ್ ಕೌನ್ಸಿಲ್‌ನಿಂದ ಭಾನುವಾರ ಗಾಂಧಿ ಭವನದಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಕಿದ್ವಾಯಿ ಸ್ಮಾರಕ ಗಂಥಿ ಸಂಸ್ಥೆಯ ನಿರ್ದೇಶಕ ಡಾ. ಸಿ. ರಾಮಚಂದ್ರ, ಐಪಿಎಸ್ ಅಧಿಕಾರಿ ಡಾ. ಎಂ.ಎನ್. ಅನುಚೇತ್ ಸೇರಿ ಹಲವು ಸಾಧಕರಿಗೆ ಪ್ರಶಸ್ತಿ ಪ್ರದಾನ ಮಾಡಲಾಯಿತು. ಶ್ರೀವಿದ್ಯಾ ಚೌಡೇಶ್ವರಿ ಮಹಾಸಂಸ್ಥಾನ ಮಠದ ಶ್ರೀ ಬಾಲ ಮಂಜುನಾಥ ಸ್ವಾಮೀಜಿ, ಗಾಂಧಿ ಭವನದ ಅಧ್ಯಕ್ಷ ವೂಡೇ ಪಿ ಕೃಷ್ಣ ಹಾಗೂ ಐಎಎಸ್ ನಿವೃತ್ತ ಅಧಿಕಾರಿ ಸಿ. ಸೋಮಶೇಖರ್ ಮತ್ತಿತರರಿದ್ದರು.

ಭಾರತ ವೈಭವ

ಸೋಮವಾರ ೦೫ ಸೆಪ್ಟೆಂಬರ್ ೨೦೨೨

# ಪ್ರೆಸ್ ಕ್ಲಬ್ ಕೌನ್ಸಿಲ್‌ಯಿಂದ ಸಾಧಕರಿಗೆ ಪ್ರಶಸ್ತಿ ಪ್ರದಾನ



ವರದಿ: ಅಯ್ಯಣ್ಣ ಮಾಸ್ಟರ್

ಬೆಂಗಳೂರು ಪೀಣ್ಯ ದಾಸರಹಳ್ಳಿ: ಬೆಂಗಳೂರು ನಗರದ ಗಾಂಧಿ ಭವನ ಆವರಣದಲ್ಲಿ ಪ್ರೆಸ್ ಕ್ಲಬ್ ಕೌನ್ಸಿಲ್ ರಾಜ್ಯಾಧ್ಯಕ್ಷ ರಾಘವೇಂದ್ರ ಆಚಾರಿ ಹಾಗೂ ಪ್ರದಾನ ಕಾರ್ಯದರ್ಶಿ ಶ್ರೀಮತಿ ಆಶಾ ಸೀನಪ್ಪ ನೇತೃತ್ವದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಸಾದಕ ಭಾಧಕ-ರಿಗೆ ಪ್ರಶಸ್ತಿ ಪ್ರದಾನ ಸಮಾರಂಭ ಆಯೋಜಿಸಲಾಗಿತ್ತು. ಶ್ರೀ ವಿದ್ಯಾ ಚೌಡೇಶ್ವರಿ ಮಹಾಸಂಸ್ಥಾನ ಮಠ ಪೂಜ್ಯ ಶ್ರೀ ಶ್ರೀ ಶ್ರೀ ಬಾಲ ಮಂಜುನಾಥ್ ಸ್ವಾಮಿ ಜೀ ಅವರ ದಿವ್ಯ ಸಾನ್ನಿಧ್ಯದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿ ಕಾರ್ಯದರ್ಶಿ ಹಾಗೂ ಗಾಂಧಿ ಭವನ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ ಕೃಷ್ಣ, ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧ್ಯಕ್ಷ ಡಾ.ಸಿ ಸೋಮಶೇಖರ್,ವಕೀಲರು ಸಂಘದ ಅಧ್ಯಕ್ಷ ವಿವೇಕ್ ಸುಬ್ಬಾರೆಡ್ಡಿ, ಕರ್ನಾಟಕ ಗ್ರಂಥಾಲಯ ಇಲಾಖೆ ನಿರ್ದೇಶಕ ಡಾ.ಸತೀಶ ಕುಮಾರ್ ಹೊಸಮನಿ, ಸಾಮಾಜಿಕ ಹೋರಾಟಗಾರ ಸಾಯಿ ದತ್ತ, ಲೇಖಕ ಅಂಕಣ-ಕಾರರು ಸಂದೀಪ್, ಬೆಂಗಳೂರು ವಿಶ್ವ ವಿದ್ಯಾಲಯ ಪ್ರಾಧ್ಯಾಪಕಿ ಪ್ರೊ.ಸಮತಾ ಬಿ ದೇಶಮಾನೆ, ಖ್ಯಾತ ಮಕ್ಕಳು ತಜ್ಞ ಹಾಗೂ ಸಮಾಜ ಸೇವಕರು ಇವರೆಲ್ಲರು ಜ್ಯೋತಿ ಬೆಳಗಿಸಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು.

ಈ ಸಂದರ್ಭದಲ್ಲಿ ಪ್ರೆಸ್ ಕ್ಲಬ್ ಕೌನ್ಸಿಲ್ ಪದಾಧಿಕಾ-ರಿಗಳಾದ ಯೋಗಾನಂದ ಹೆಚ್ ವಿ, ಕೊಟ್ರೇಶ್,ರಂಗನಾಥ ಗೌಡ, ಚಂದ್ರಕುಮಾರ್, ನಾಗೇಂದ್ರ, ಶ್ರೀಮತಿ ಸುಲೋಚನ ಮತ್ತು ಸಾಹಿತಿಗಳು ವಾಗ್ಮಿಗಳು ಸಮಾಜ ನಾಗರಿಕರು ಮುಂತಾದವರು ಇದ್ದರು.

ಡೈಲಿ ನ್ಯೂಸ್ Monday 05 September 2022



ಪೀಣ್ಯ ದಾಸರಹಳ್ಳಿ: ಬೆಂಗಳೂರು ಗಾಂಧಿ ಭವನ ಆವರಣದಲ್ಲಿ ಪ್ರೆಸ್ ಕ್ಲಬ್ ಕೌನ್ಸಿಲ್ ರಾಜ್ಯಾಧ್ಯಕ್ಷ ರಾಘವೇಂದ್ರ ಆಚಾರಿ ಹಾಗೂ ಪ್ರಧಾನ ಕಾರ್ಯದರ್ಶಿ ಆಶಾ ಸೀನಪ್ಪ ನೇತೃತ್ವದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಸಾಧಕರಿಗೆ ಪ್ರಶಸ್ತಿ ಪ್ರದಾನ ಮಾಡಲಾಯಿತು. ಶ್ರೀ ವಿದ್ಯಾ ಚೌಡೇಶ್ವರಿ ಮಹಾಸಂಸ್ಥಾನ ಮಠದ ಶ್ರೀ ಬಾಲ ಮಂಜುನಾಥ್ ಸ್ವಾಮೀಜಿ , ಶೇಷಾದ್ರಿಪುರಂ ಶಿಕ್ಷಣ ದತ್ತಿ ಕಾರ್ಯದರ್ಶಿ ಹಾಗೂ ಗಾಂಧಿ ಭವನ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ. ಕೃಷ್ಣ, ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧ್ಯಕ್ಷ ಡಾ.ಸಿ ಸೋಮಶೇಖರ್,ವಕೀಲರ ಸಂಘದ ಅಧ್ಯಕ್ಷ ವಿವೇಕ್ ಸುಬ್ಬಾರೆಡ್ಡಿ, ಕರ್ನಾಟಕ ಗ್ರಂಥಾಲಯ ಇಲಾಖೆ ನಿರ್ದೇಶಕ ಡಾ.ಸತೀಶ್ ಕುಮಾರ್ ಹೊಸಮನಿ, ಸಾಮಾಜಿಕ ಹೋರಾಟಗಾರ ಸಾಯಿ ದತ್ತ, ಲೇಖಕ ಅಂಕಣಕಾರು ಸಂದೀಪ್, ಬೆಂಗಳೂರು ವಿಶ್ವ ವಿದ್ಯಾಲಯ ಪ್ರಾಧ್ಯಾಪಕಿ ಪ್ರೊ.ಸಮತಾ ಬಿ ದೇಶಮಾನೆ,ಕ್ಲಬ್ ಕೌನ್ಸಿಲ್ ಪದಾಧಿಕಾರಿಗಳಾದ ಯೋಗಾನಂದ ಎಚ್ ವಿ, ಕೊಟ್ರೇಶ್,ರಂಗನಾಥ ಗೌಡ, ಚಂದ್ರಕುಮಾರ್, ನಾಗೇಂದ್ರ, ಸುಲೋಚನ ಮತ್ತಿತರರು ಇದ್ದರು.

ಪ್ರಜಾವಾಣಿ
ಭಾನುವಾರ ○ ಸೆಪ್ಟೆಂಬರ್ 4, 2022

ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಘಟಿಕೋತ್ಸವ ಸಮಾರಂಭ

# 3,000 ವಿದ್ಯಾರ್ಥಿಗಳಿಗೆ ಪದವಿ ಪ್ರದಾನ

ಪ್ರಜಾವಾಣಿ ವಾರ್ತೆ

ಯಲಹಂಕ: ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನಲ್ಲಿ ನಡೆದ ವಾರ್ಷಿಕ ಘಟಿಕೋತ್ಸವ ಸಮಾರಂಭದಲ್ಲಿ ವಿವಿಧ ವಿಷಯಗಳಲ್ಲಿ ಪದವಿ ಮತ್ತು ಸ್ನಾತಕೋತ್ತರ ಪೂರ್ಣಗೊಳಿಸಿದ ಒಟ್ಟು 3,000 ವಿದ್ಯಾರ್ಥಿಗಳಿಗೆ ಪದವಿ ಪ್ರದಾನ ಮಾಡಲಾಯಿತು.

ವಿಶ್ವವಿದ್ಯಾಲಯ ಮಟ್ಟದಲ್ಲಿ ರ್‍ಯಾಂಕ್ ಗಳಿಸಿದ 8 ವಿದ್ಯಾರ್ಥಿಗಳಿಗೆ ಚಿನ್ನದ ಪದಕ ಸೇರಿ 46 ವಿದ್ಯಾರ್ಥಿಗಳಿಗೆ ಹಾಗೂ 17 ಮಂದಿಗೆ ಪಿಎಚ್.ಡಿ ಪದವಿ ಪ್ರದಾನ ಮಾಡಲಾಯಿತು. ಅಲ್ಲದೆ, ಮೂವರು ವಿದ್ಯಾರ್ಥಿಗಳಿಗೆ 'ಗೋಪಾಲಕೃಷ್ಣ ಗೋಧಾಮಣಿ' ದತ್ತಿ ಬಹುಮಾನ ವಿತರಿಸಲಾಯಿತು.

ಈ ವೇಳೆ ಮಾತನಾಡಿದ ಕರ್ನಾಟಕ ಜನಪದ ಪರಿಷತ್‌ನ ಅಧ್ಯಕ್ಷ ಡಾ.ಟಿ.ತಿಮ್ಮೇಗೌಡ, 'ಭಾರತ ಅತಿ ಹೆಚ್ಚು ಯುವಕರನ್ನು ಹೊಂದಿರುವ ದೇಶವಾಗಿದ್ದು, ಇಂದು ಅಂತರ ರಾಷ್ಟ್ರೀಯ ಮಟ್ಟದಲ್ಲಿ ಬೆಂಗಳೂರು ಎಲ್ಲಾ ಅವಕಾಶ ಮತ್ತು ಸಾಧ್ಯತೆಗಳಿಗೆ ದೊಡ್ಡ ಹೆಬ್ಬಾಗಿಲಾಗಿದೆ. ಹಾಗಾಗಿ ಇಂದಿನ ಪದವೀಧರರು ತಮ್ಮ ಮುಂದಿನ ಭವಿಷ್ಯವನ್ನು ಉನ್ನತ ಮಟ್ಟದಲ್ಲಿ ರೂಪಿಸಿಕೊಳ್ಳುವ ಮೂಲಕ ಈ ದೇಶದ ಆಸ್ತಿಯಾಗಬೇಕು' ಎಂದು ತಿಳಿಸಿದರು.

ಶಿಕ್ಷಣ ತಜ್ಞ ವೂಡೇ.ಪಿ.ಕೃಷ್ಣ, ಶೇಷಾದ್ರಿಪುರ ಶಿಕ್ಷಣ ದತ್ತಿಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಉಪಾಧ್ಯಕ್ಷ ಟಿ.ಎಸ್. ಹೆಂಜಾರಪ್ಪ, ಜಂಟಿ ಕಾರ್ಯದರ್ಶಿ ಶೇಷ ನಾರಾಯಣ, ಆಡಳಿತ ಸಲಹಾ ಮಂಡಳಿಗಳ ಅಧ್ಯಕ್ಷ ರಾದ ಎಂ.ಎಸ್.ನಟರಾಜ್, ಪ್ರೊ.ಕೆ.ಪಿ. ನರಸಿಂಹಮೂರ್ತಿ, ಪಿ.ಸಿ. ನಾರಾಯಣ, ಡಬ್ಲ್ಯೂ.ಡಿ. ವಿಜಯಕುಮಾರ್, ಡಬ್ಲ್ಯೂ.ಡಿ. ಅಶೋಕ್, ಪ್ರಾಂಶುಪಾಲ ಎ.ಎಸ್.ಎನ್. ವೆಂಕಟೇಶ್ ಇದ್ದರು.



ಯಲಹಂಕದ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನಲ್ಲಿ ನಡೆದ ವಾರ್ಷಿಕ ಘಟಿಕೋತ್ಸವ ಸಮಾರಂಭದಲ್ಲಿ ವಿದ್ಯಾರ್ಥಿನಿಯೊಬ್ಬರಿಗೆ ಪದವಿ ಪ್ರದಾನ ಮಾಡಲಾಯಿತು. ಕರ್ನಾಟಕ ಜನಪದ ಪರಿಷತ್‌ನ ಅಧ್ಯಕ್ಷ ಡಾ.ಟಿ.ತಿಮ್ಮೇಗೌಡ, ಶಿಕ್ಷಣತಜ್ಞ ವೂಡೇ.ಪಿ.ಕೃಷ್ಣ, ಶೇಷಾದ್ರಿಪುರ ಶಿಕ್ಷಣ ದತ್ತಿಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಉಪಾಧ್ಯಕ್ಷ ಟಿ.ಎಸ್.ಹೆಂಜಾರಪ್ಪ, ಜಂಟಿ ಕಾರ್ಯದರ್ಶಿ ಶೇಷ ನಾರಾಯಣ, ಪ್ರಾಂಶುಪಾಲ ಡಾ.ಎಸ್.ಎನ್. ವೆಂಕಟೇಶ್ ಇತರರು ಇದ್ದರು.





ಇಂದುಸಂಜೆ

ಶನಿವಾರ
03 ಸೆಪ್ಟಂಬರ್ 2022

# ಶೇಷಾದ್ರಿ ಪುರಂ ಪ್ರಥಮ ದರ್ಜೆ ಕಾಲೇಜು ಯಲಹಂಕ ಘಟಿಕೋತ್ಸವ




ಬೆಂಗಳೂರು: ಯಲಹಂಕದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ಘಟಿಕೋತ್ಸವ ದಿನಾಚರಣೆ ಕಾರ್ಯಕ್ರಮ ಜರುಗಿತು.

ಕಾರ್ಯಕ್ರಮದಲ್ಲಿ ಯಲಹಂಕ ಕಾಲೇಜು ಪ್ರಾಂಶುಪಾಲ ಡಾ.ಎಸ್.ಎನ್.ವೆಂಕಟೇಶ್, ಅಧ್ಯಕ್ಷರು ಎನ್.ಆರ್. ಪಂಡಿತಾರಾಧ್ಯ, ಅಧ್ಯಕ್ಷರು ಶೇಷಾದ್ರಿಪುರಂ ಶಿಕ್ಷಣ ಟ್ರಸ್ಟ್, ಮುಖ್ಯ ಅತಿಥಿ ಡಾ.ಟಿ. ತಿಮ್ಮೇಗೌಡ ಅಧ್ಯಕ್ಷರು ಕರ್ನಾಟಕ ಜಾನಪದ ಪರಿಷತ್ತು, ಗೌರವ ಉಪಸ್ಥಿತಿ ನಾಡೋಜ ಡಾ.ವುಡೆ.ಪಿ.ಕೃಷ್ಣ ಗೌರವಾನ್ವಿತ ಮುಖ್ಯ ಕಾರ್ಯದರ್ಶಿ, ಎಂ.ಎಸ್.ನಟರಾಜ್, ಪ್ರೊ.ಕೆ.ಪಿ.ನರಶಿಮಾಮೂರ್ತಿ, ಪಿ.ಸಿ. ನಾರಾಯಣ್, ಆರ್.ಕೃಷ್ಣಸ್ವಾಮಿ, ಬಿ.ವಿ. ಅನಂತರಾಮ್, ಡಬ್ಲ್ಯೂ.ಡಿ.ವಿಜಯಕುಮಾರ್, ಡಬ್ಲ್ಯೂ.ಡಿ. ಅಶೋಕ್, ಶೇಷಾದ್ರಿಪುರಂ ಶಿಕ್ಷಣ ಟ್ರಸ್ಟ್ ಗ್ರೂಪ್‌ನ ಪ್ರಾಂಶುಪಾಲರು, ಪ್ರಾಧ್ಯಾಪಕರು, ಉಪನ್ಯಾಸಕರು, ಸಿಬ್ಬಂದಿಗಳು ಮತ್ತು ವಿದ್ಯಾರ್ಥಿಗಳು ಉಪಸ್ಥಿತರಿದ್ದರು.

VIJAYAVANI BENGALURU

2 ಬುಧವಾರ 24 ಆಗಸ್ಟ್ 2022
24 AUGUST 2022

# ಮೆರಿಟ್ ಸ್ಕಾಲರ್‌ಶಿಪ್ ವಿತರಣೆ

ವಿಜಯವಾಣಿ ಚಿತ್ರ



ಶೇಷಾದ್ರಿಪುರಂ ಪಿಯು ಕಾಲೇಜಿನಲ್ಲಿ ಮೆರಿಟ್ ಸ್ಕಾಲರ್‌ಶಿಪ್ ವಿತರಣೆ ಕಾರ್ಯಕ್ರಮದಲ್ಲಿ ಡಾ.ವೂಡೇ, ಪಿ.ಕೃಷ್ಣ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಧರ್ಮದರ್ಶಿಗಳಾದ ಡಬ್ಲ್ಯೂ.ಡಿ. ಅಶೋಕ್, ಬಿ.ಎಂ ಪಾರ್ಥಸಾರಥಿ, ಬಿ.ಎ. ಅನಂತರಾಮು ಇದ್ದರು.

ವಿಜಯವಾಣಿ ಸುದ್ದಿಜಾಲ ತುಮಕೂರು

ಶೇ.85ಕ್ಕೂ ಹೆಚ್ಚು ಅಂಕ ಪಡೆದು ಪಿಯುಸಿ ಪ್ರವೇಶ ಪಡೆದ 300 ವಿದ್ಯಾರ್ಥಿಗಳು ಹಾಗೂ ಶೇ.90ಕ್ಕೂ ಅಧಿಕ ಅಂಕಗಳಿಸಿರುವ ಪದವಿ ವಿದ್ಯಾರ್ಥಿಗಳಿಗೆ ನಗರದ ಶೇಷಾದ್ರಿಪುರಂ ಪಿಯು ಕಾಲೇಜಿನಲ್ಲಿ ಮೆರಿಟ್ ಸ್ಕಾಲರ್ ಶಿಪ್ ವಿತರಿಸಲಾಯಿತು.

ನಾಡೋಜ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ಕೈಗೆಟುಕುವ ದರದಲ್ಲಿ ಶಿಕ್ಷಣ ಕೊಡುವುದು ಮತ್ತು ಸಮಾಜಕ್ಕೆ ಉತ್ತಮ ಪ್ರಜೆಗಳನ್ನು ಕೊಡುವುದು ಶಿಕ್ಷಣ ಸಂಸ್ಥೆಯ ಮುಖ್ಯ ಉದ್ದೇಶ ಎಂದರು.

ಶಿಕ್ಷಣ ದತ್ತಿಯ ತುಮಕೂರು ಬೆಂಗಳೂರು, ಮಂಡ್ಯ, ಮೈಸೂರು, ಪದವಿ ಪೂರ್ವ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಈ ವರ್ಷ 2.6 ಕೋಟಿ ರೂ. ವಿದ್ಯಾರ್ಥಿ ವೇತನ ವಿತರಿಸುವುದು ಮಾದರಿಯಾಗಿದೆ ಎಂದರು. ಕರೊನಾ ಸಂದರ್ಭದಲ್ಲಿಯೂ ಅಧ್ಯಾಪಕರು ಶ್ರಮವಹಿಸಿ ಪಾಠ ಮಾಡಿ ಸಂಸ್ಥೆಗೆ ಹೆಸರು ತಂದರು. ಶಿಕ್ಷಕರೇ ಶಿಕ್ಷಣದ ಆತ್ಮ. ನಮ್ಮ ಸಂಸ್ಥೆಯ ಶಕ್ತಿ ಉತ್ತಮ ಅಧ್ಯಾಪಕರು ಎಂದರು.

ಡಾ.ಟಿ.ಎಚ್.ಆಂಜನಪ್ಪ ಮಾತನಾಡಿ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಮಕ್ಕಳ ಶ್ರೇಯೋಭಿವೃದ್ಧಿಗೆ ಶ್ರಮಿಸುತ್ತಿದೆ.

ಈ ಹಿಂದೆ ಶಿಕ್ಷಣ ಪಡೆಯುವುದು ಕಷ್ಟವಾಗಿತ್ತು. ಸಿಕ್ಕ ಅವಕಾಶಗಳನ್ನು ಬಳಸಿಕೊಂಡು ಉತ್ತಮ ಸಾಧನೆ ಮಾಡಿ. ಬೇರೆಯವರೊಂದಿಗೆ ಹೋಲಿಸಿಕೊಂಡು ಕೊರಗುವುದನ್ನು ಬಿಟ್ಟು ಸಾಧನೆಯ ಕಡೆ ಮುಖ ಮಾಡಬೇಕು ಎಂದರು. ಕಷ್ಟಪಟ್ಟರೆ ಪ್ರತಿಫಲ ಸಿಕ್ಕೇ ಸಿಗುತ್ತದೆ ಎಂಬುದಕ್ಕೆ ಅಬ್ದುಲ್ ಕಲಾಂ ಜೀವನ ಸ್ಫೂರ್ತಿಯಾಗಬೇಕು. ಕಾಯಕವೇ ಕೈಲಾಸ ಎಂಬ ಬಸವಣ್ಣನವರ ಮಾತಿನಂತೆ ನಿಮ್ಮ ಕಾಯಕ ಮಾಡಿ ಎಂದರು. ಪಿಯು ಕಾಲೇಜಿನ ಪ್ರಾಂಶುಪಾಲ ಪ್ರೊ. ಬಿ.ವಿ.ಬಸವರ್ಧ್ರಾಜು, ಪದವಿ ಕಾಲೇಜಿನ ಪ್ರಾಂಶುಪಾಲ ಡಾ.ಜಗದೀಶ ಜಿ.ಟಿ., ಜಿ.ಸಿ.ಬೋರ್ಡ್ ಸದಸ್ಯೆ ಶಾಂತಾ ಕುಮಾರಿ ಇತರರು ಇದ್ದರು.

4
ಉದಯವಾಣಿ ಬೆಂಗಳೂರು
ಬುಧವಾರ, ಆಗಸ್ಟ್ 24, 2022

# ದೃಢ ನಿರ್ಧಾರದಿಂದ ಉನ್ನತ ಸಾಧನೆ ಸಾಧ್ಯ



ಕೆಂಗೇರಿ ಉಪನಗರದ ಶೇಷಾದ್ರಿಪುರಂ ಅಕಾಡೆಮಿ ಆಫ್ ಬಿಸಿನೆಸ್ ಸ್ಟಡೀಸ್‌ನಲ್ಲಿ ನಡೆದ ಪ್ರತಿಭಾ ಪುರಸ್ಕಾರ ಮತ್ತು ಪುನಶ್ಚೇತನ ಕಾರ್ಯಕ್ರಮಕ್ಕೆ ಬೆಂಗಳೂರು ವಿವಿ ನಿವೃತ್ತ ಉಪ ಕುಲಪತಿ ಡಾ.ಕೆ.ಆರ್.ವೇಣುಗೋಪಾಲ್ ಚಾಲನೆ ನೀಡಿದರು.

ಕೆಂಗೇರಿ: ವಿದ್ಯಾರ್ಥಿ ಜೀವನದಲ್ಲಿ ಕೈಗೊಳ್ಳುವ ದೃಢ ನಿರ್ಧಾರದಿಂದ ಉನ್ನತವಾದದನ್ನು ಸಾಧಿಸಬಹುದು ಎಂದು ಬೆಂಗಳೂರು ವಿಶ್ವವಿದ್ಯಾಲಯದ ನಿವೃತ್ತ ಉಪ ಕುಲಪತಿ ಡಾ.ಕೆ.ಆರ್.ವೇಣುಗೋಪಾಲ್ ತಿಳಿಸಿದರು.

ಕೆಂಗೇರಿ ಉಪನಗರದ ಶೇಷಾದ್ರಿಪುರಂ ಅಕಾಡೆಮಿ ಆಫ್ ಬಿಸಿನೆಸ್ ಸ್ಟಡೀಸ್‌ನ ಆವರಣದಲ್ಲಿ 'ಪರಿಚಯ 2022-23 ಮೊದಲ ವರ್ಷದ ಪದವಿ ವಿದ್ಯಾರ್ಥಿಗಳಿಗೆ' ಆಯೋಜಿಸಿದ್ದ ಪ್ರತಿಭಾ ಪುರಸ್ಕಾರ ಮತ್ತು ಪುನಶ್ಚೇತನ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಮಾತನಾಡಿದರು.

ವಿದ್ಯಾರ್ಥಿಗಳು ದೈಹಿಕ ಶ್ರಮ, ಉತ್ತಮ ಆಹಾರ ಸೇವನೆ, ಸರಿಯಾದ ನಿದ್ರೆಯನ್ನು ರೂಢಿಸಿಕೊಳ್ಳಬೇಕು: ಶ್ರದ್ಧೆ ಸಮಯ ಪಾಲನೆ ಪಾಲಿಸುವ ಮೂಲಕ ಯಶಸ್ಸಿನ ಹಾದಿಯಲ್ಲಿ ಸಾಗಬೇಕು ಎಂದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ, ನಾಡೋಜ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ದ್ವಿತೀಯ ಪಿಯುಸಿಯಲ್ಲಿ ಶೇ. 90 ಕ್ಕೂ ಹೆಚ್ಚು ಅಂಕಗಳಿಸಿದ ವಿದ್ಯಾರ್ಥಿಗಳಿಗೆ 10 ಸಾವಿರ ನಗದು ಬಹುಮಾನ ನೀಡಲಾಗುತ್ತಿದೆ. ಈ ಬಾರಿ 25ಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ದನ ನೀಡಲಾಗಿದೆ ಎಂದರು. ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಜಂಟಿ ಕಾರ್ಯದರ್ಶಿ ಎಸ್.ಶೇಷನಾರಾಯಣ, ಖಜಾಂಚಿ ಜಿ.ಎಂ.ಪಾರ್ಥ ಸಾರಥಿ, ಕಾಲೇಜು ಕಾರ್ಯಕಾರಿ ಸಮಿತಿ ಅಧ್ಯಕ್ಷ ಎ.ಅನಂತರಾಮು, ಪ್ರಾಂಶುಪಾಲ ಪ್ರೊ.ಜಯ ರಾಮ್, ಪಿಯು ಕಾಲೇಜಿನ ಪ್ರಾಂಶುಪಾಲ ಡಾ.ಮಂಜುನಾಥ್ ಮತ್ತಿತರರಿದ್ದರು.

ವಿಶ್ವವಾಣಿ

# ಉತ್ತಮ ಪ್ರಜೆಗಳನ್ನು ರೂಪಿಸುವುದು ಸಂಸ್ಥೆಯ ಉದ್ದೇಶ

ತುಮಕೂರು: ಉತ್ತಮ ಪ್ರಜೆಗಳನ್ನು ರೂಪಿಸುವುದು ಸಂಸ್ಥೆಯ ಉದ್ದೇಶವೆಂದು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ, ನಾಡೋಜ ವೂಡೇ ಪಿ.ಕೃಷ್ಣ ತಿಳಿಸಿದರು.

ನಗರದ ಶೇಷಾದ್ರಿಪುರಂ ಪಿ.ಯು. ಕಾಲೇಜಿನಲ್ಲಿ ವಿದ್ಯಾರ್ಥಿಗಳಿಗೆ ಮೆರಿಟ್ ಸ್ಕಾಲರ್ ಶಿಪ್ ವಿತರಿಸಿ ಮಾತನಾಡಿದರು. ನಮ್ಮ ಶಿಕ್ಷಣ ದತ್ತಿಯ ತುಮಕೂರು ಬೆಂಗಳೂರು, ಮಂಡ್ಯ, ಮೈಸೂರು, ಪದವಿ ಪೂರ್ವ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ 2.6 ಕೋಟಿ ವಿದ್ಯಾರ್ಥಿ ವೇತನ ವಿತರಿಸುವುದು ಹೆಮ್ಮೆಯಸಂಗತಿ. ಕರೋನ ವೇಳೆ ಸಹ ನಮ್ಮ ಅಧ್ಯಾಪಕರು ಶ್ರಮವಹಿಸಿ ಪಾಠ ಮಾಡಿ ಸಂಸ್ಥೆಗೆ ಹೆಸರು ತಂದರು. ಶಿಕ್ಷಕರೇ ಶಿಕ್ಷಣದ ಆತ್ಮ, ನಮ್ಮ ಸಂಸ್ಥೆಯ ಶಕ್ತಿ ಉತ್ತಮ ಅಧ್ಯಾಪಕರು ಎಂದು ಶ್ಲಾಘಿಸಿದರು.

ಡಾ. ಟಿ.ಎಚ್.ಆಂಜನಪ್ಪ ಮಾತನಾಡಿ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಮಕ್ಕಳ ಶ್ರೇಯೋಭಿವೃದ್ಧಿಗೆ ಶ್ರಮಿಸುವ ನಾಡಿನ ಉತ್ತಮ ಸಂಸ್ಥೆಯಾಗಿದೆ. ನಮ್ಮ ಕಾಲದಲ್ಲಿ ಶಿಕ್ಷಣ ಪಡೆಯುವುದು ಕಷ್ಟವಾಗಿತ್ತು. ನೀವು ಅದೃಷ್ಟವಂತರು. ನಿಮಗೆ ಸಿಕ್ಕ ಅವಕಾಶಗಳನ್ನು ಬಳಸಿಕೊಂಡು ಉತ್ತಮ ಸಾಧನೆಯನ್ನು ಮಾಡಿ ಎಂದು ತಿಳಿ ಹೇಳಿದರು.

ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಧರ್ಮದರ್ಶಿ ಡಬ್ಲ್ಯೂ.ಡಿ ಅಶೋಕ್, ಬಿ.ಎಂ ಪಾರ್ಥಸಾರಥಿ, ಬಿ.ಎ.ಅನಂತರಾಮು, ಪಿ.ಯು ಕಾಲೇಜಿನ ಪ್ರಾಂಶುಪಾಲರಾದ ಪ್ರೊ.ಬಿ.ವಿ.ಬಸವರಾಜು, ಪದವಿ ಕಾಲೇಜಿನ ಪ್ರಾಂಶುಪಾಲ ಡಾ. ಜಗದೀಶ ಜೆ.ಟಿ., ಜೆ.ಸಿ. ಬೋರ್ಡ್ ಸದಸ್ಯೆ ಶಾಂತಕುಮಾರಿ, ಸಿಬ್ಬಂದಿ, ವಿದ್ಯಾರ್ಥಿಗಳು ಉಪಸ್ಥಿತರಿದ್ದರು.

ಶೇಷಾದ್ರಿಪುರಂ ಪಿ.ಯು.ಕಾಲೇಜಿನಲ್ಲಿ ವಿದ್ಯಾರ್ಥಿಗಳಿಗೆ ಮೆರಿಟ್ ಸ್ಕಾಲರ್ ಶಿಪ್ ವಿತರಿಸಲಾಯಿತು.

ಪ್ರಜಾ ಪ್ರಗತಿ

Aug 23, 2022

# ಕೈಗೆಟಕುವ ದರದಲ್ಲಿ ಶಿಕ್ಷಣ: ಡಾ.ವೂಡೇ.ಪಿ.ಕೃಷ್ಣ

■ ಪ್ರಜಾಪ್ರಗತಿ.ಕಾಂ

ತುಮಕೂರು: ನಗರದ ಶೇಷಾದ್ರಿಪುರಂ ಪಿ.ಯು. ಕಾಲೇಜಿನಲ್ಲಿ ವಿದ್ಯಾರ್ಥಿಗಳಿಗೆ ಮೆರಿಟ್ ಸ್ಕಾಲರ್ ಶಿಪ್ ವಿತರಿಸುವ ಕಾರ್ಯಕ್ರಮ ಏರ್ಪಡಿಸಲಾಗಿತ್ತು.

ಹೊಸದಾಗಿ ಪಿಯುಸಿಗೆ ಪ್ರವೇಶ ಪಡೆದಿರುವ, ಶೇ 85ಕ್ಕೂ ಹೆಚ್ಚು ಅಂಕಗಳಿಸಿರುವ 300 ವಿದ್ಯಾರ್ಥಿಗಳಿಗೆ ಹಾಗೂ ಶೇ 90 ಕ್ಕೂ ಹೆಚ್ಚು ಅಂಕಗಳಿಸಿರುವ ಪದವಿ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನಪತ್ರವನ್ನು ವಿತರಿಸಿ ಮಾತನಾಡಿದ ನಾಡೋಜ ಡಾ.ವೂಡೇ.ಪಿ.ಕೃಷ್ಣ ಅವರು ಕೈಗೆಟಕುವ ದರದಲ್ಲಿ ಶಿಕ್ಷಣ ಕೊಡುವುದು ಮತ್ತು

> ವಿದ್ಯಾರ್ಥಿಗಳಿಗೆ ಏಕಾಗ್ರತೆ ಮುಖ್ಯ, ತದೇಕ ಚಿತ್ತದಿಂದ ಪಾಠ ಕೇಳಬೇಕು. ಉತ್ತಮ ಅಂಕಗಳನು ಪಡೆಯದೇ ಇರುವವರಿಗೆ ಕೀಳರಿಮೆ ಬೇಡ ಕಷ್ಟಪಟ್ಟರೆ ಪ್ರತಿಫಲ ಸಿಕ್ಕೇ ಸಿಗುತ್ತದೆ ಎಂಬುದಕ್ಕೆ ಅಬ್ದುಲ್ ಕಲಾಂ, ಇವರ ಜೀವನ ಸ್ಫೂರ್ತಿಯಾಗಬೇಕು. ಕಾಯಕವೇ ಕೈಲಾಸ ಎಂಬ ಬಸವಣ್ಣನವರ ಮಾತಿನಂತೆ ನಿಮ್ಮ ಕಾಯಕ ಮಾಡಿ.
>
> ■ ಡಾ. ಟಿ. ಹೆಚ್ ಆಂಜನಪ್ಪ



ಸಮಾಜಕ್ಕೆ ಉತ್ತಮ ಪ್ರಜೆಗಳನ್ನು ಕೊಡುವುದು ನಮ್ಮ ಶಿಕ್ಷಣ ಸಂಸ್ಥೆಯ ಮುಖ್ಯ ಉದ್ದೇಶ. ನಮ್ಮ ಶಿಕ್ಷಣ ದತ್ತಿಯು ತುಮಕೂರು ಬೆಂಗಳೂರು, ಮಂಡ್ಯ, ಮೈಸೂರು, ಪದವಿ ಪೂರ್ವ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಈ ವರ್ಷ 2.6 ಕೋಟಿ ವಿದ್ಯಾರ್ಥಿ ವೇತನ ವಿತರಿಸುವುದು ಹೆಮ್ಮೆಯಸಂಗತಿ ಎಂದರು.

ಕರೋನ ಸಂದರ್ಭದಲ್ಲಿ ಸಹ ನಮ್ಮ ಅಧ್ಯಾಪಕರು ಶ್ರಮವಹಿಸಿ ಪಾಠ ಮಾಡಿ ಸಂಸ್ಥೆಗೆ ಹೆಸರು ತಂದರು. ಶಿಕ್ಷಕರೇ ಶಿಕ್ಷಣದ ಆತ್ಮ. ನಮ್ಮ ಸಂಸ್ಥೆಯ ಶಕ್ತಿ ಉತ್ತಮ ಅಧ್ಯಾಪಕರು ಎಂದು ಶ್ಲಾಘಿಸಿದರು.

ಡಾ. ಟಿ. ಹೆಚ್ ಆಂಜನಪ್ಪ ಮಾತನಾಡಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಮಕ್ಕಳ ಶ್ರೇಯೋಭಿವೃದ್ಧಿಗೆ ಶ್ರಮಿಸುವ ನಾಡಿನ ಉತ್ತಮ ಸಂಸ್ಥೆಯಾಗಿದೆ. ನಮ್ಮ ಕಾಲದಲ್ಲಿ ಶಿಕ್ಷಣ ಪಡೆಯುವುದು ಕಷ್ಟವಾಗಿತ್ತು. ನೀವು ಅದೃಷ್ಟವಂತರು. ನಿಮಗೆ ಸಿಕ್ಕ ಅವಕಾಶಗಳನ್ನು ಬಳಸಿಕೊಂಡು ಉತ್ತಮ ಸಾಧನೆಯನ್ನು ಮಾಡಿ. ಬೇರೆಯವರೊಂದಿಗೆ ಹೋಲಿಸಿ ಕೊಂಡು ಕೊರಗುವುದನ್ನು ಬಿಟ್ಟು ಸಾಧನೆಯ ಕಡೆ ಮುಖ ಮಾಡಿ ಎಂದರು.

ಈ ಕಾರ್ಯಕ್ರಮದಲ್ಲಿ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಧರ್ಮದರ್ಶಿಗಳಾದ ಡಬ್ಲ್ಯೂ. ಡಿ ಅಶೋಕ್, ಬಿ.ಎಂ. ಪಾರ್ಥಸಾರಥಿ, ಬಿ.ಎ.ಅನಂತರಾಮು, ಪಿ.ಯು ಕಾಲೇಜಿನ ಪ್ರಾಂಶುಪಾಲರಾದ ಪ್ರೊ.ಬಿ.ವಿ.ಬಸವರಾಜು, ಪದವಿ ಕಾಲೇಜಿನ ಪ್ರಾಂಶುಪಾಲ ಡಾ.ಜಗದೀಶ ಜಿ.ಟಿ., ಬಿ.ಸಿ.ಬೋರ್ಡ್ ಸದಸ್ಯೆ ಶಾಂತಕುಮಾರಿ ಕಾಲೇಜಿನ ಬೋಧಕರು ಬೋಧಕೇತರರು , ವಿದ್ಯಾರ್ಥಿಗಳು ಉಪಸ್ಥಿತರಿದ್ದರು.

ಪ್ರಜಾ ಪ್ರಗತಿ

Aug 17, 2022

# ಆಧ್ಯಾತ್ಮದಿಂದ ವ್ಯಕ್ತಿತ್ವದ ಆರೋಹಣ ಸಾಧ್ಯ

## ರಾಮಕೃಷ್ಣಾಶ್ರಮ-ಶೇಷಾದ್ರಿಪುರಂ ಕಾಲೇಜು ಸಹಯೋಗದಲ್ಲಿ ಯುವ ಸಮ್ಮೇಳನಕ್ಕೆ ಚಾಲನೆ

■ ಪ್ರಜಾಪ್ರಗತಿ.ಕಾಂ

ತುಮಕೂರು: ಸ್ವಾಮಿ ವಿವೇಕಾನಂದರು ಯುವಕರ ಮೇಲೆ ಅಪಾರ ಭರವಸೆ ಇಟ್ಟುಕೊಂಡಿದ್ದರು. ಯುವಜನತೆ ತಮ್ಮ ವ್ಯಕ್ತಿತ್ವವನ್ನು ಉನ್ನತಕ್ಕೆ ಬೆಳೆಸಿಕೊಳ್ಳಬೇಕಾದರೆ ಆಧ್ಯಾತ್ಮ ಚಿಂತನೆ ಅವಶ್ಯ ಎಂದು ರಾಮಕೃಷ್ಣಮಠ ಮತ್ತು ಮಿಷನ್‌ನ ಉಪಾಧ್ಯಕ್ಷರಾದ ಶ್ರೀ ಸ್ವಾಮಿ ಗೌತಮಾನಂದ ಮಹಾರಾಜ್ ಹೇಳಿದರು.

ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಅಮೃತ ಮಹೋತ್ಸವದ ಅಂಗವಾಗಿ ಆಯೋಜಿಸಿದ್ದ ಆರೋಹ ಎಂಬ ಎರಡು ದಿನದ ಅಂತಾರಾಷ್ಟ್ರೀಯ ಯುವ ಸಮ್ಮೇಳನವನ್ನು ವರ್ಚುಯಲ್ ಮೂಲಕ ಉದ್ಘಾಟಿಸಿ ಮಾತನಾಡಿದ ಅವರು ಸತ್ಯ ಮತ್ತು ನಿರ್ಭಯತೆ ಇಂದಿನ ಯುವಕರ ಶಕ್ತಿಯಾಗಬೇಕು. ನಿರ್ಭಯತೆಯಿಂದ ಇದ್ದರೆ ಜೀವನದಲ್ಲಿ ಎಲ್ಲಾ ರೀತಿಯ ಸಾಧನೆಗಳನ್ನು ಮಾಡಬಹುದು. ಜೀವನದಲ್ಲಿ ಯುವಕರು ಆಧ್ಯಾತ್ಮಿಕ ಶಕ್ತಿಯನ್ನು ರೂಪಿಸಿಕೊಂಡರೆ ಜೀವನದಲ್ಲಿ ಯಶಸ್ಸು ಪಡೆಯಬಹುದು. ನಾನು ಶೇಷಾದ್ರಿಪುರಂ ಸಂಸ್ಥೆಯ ಹಳೆಯ ವಿದ್ಯಾರ್ಥಿ ಎಂದು ಹೇಳಲು ಹೆಮ್ಮೆಯಾಗುತ್ತದೆ ಎಂದು ಹೇಳಿ ರಾಮಕೃಷ್ಣ ಮಿಷನ್, ಕಾಲೇಜಿನ ವಿವೇಕಾನಂದ ಅಧ್ಯಯನ ಕೇಂದ್ರ ಜಂಟಿಯಾಗಿ ಸಂಘಟಿಸಿರುವ 2 ದಿನಗಳ ಸಮ್ಮೇಳನ ರಾಷ್ಟ್ರ ನಿರ್ಮಾಣಕ್ಕೆ ಯುವಜನರನ್ನು ಅಣಿಗೊಳಿಸಲಿ ಎಂದರು.

ಈ ಕಾರ್ಯಕ್ರಮದಲ್ಲಿ ಯುವ ಜನೋತ್ಸವದ ಮಾರ್ಗದರ್ಶಕರಾದ ತುಮಕೂರು ಆಶ್ರಮದ ಶ್ರೀ ವೀರೇಶಾನಂದ ಸರಸ್ವತಿ ಸ್ವಾಮೀಜಿ, ಮೈಸೂರು ಆಶ್ರಮದ ಮುಖ್ಯಸ್ಥರಾದ ಶ್ರೀ ಮುಕ್ತಿದಾನಂದ ಸ್ವಾಮೀಜಿ, ಗದಗ ಬಿಜಾಪುರ ಆಶ್ರಮದ ಶ್ರೀ ನಿರ್ಭಯಾನಂದ ಸ್ವಾಮೀಜಿ, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಧರ್ಮದರ್ಶಿಗಳಾದ ಡಬ್ಲ್ಯೂ. ಡಿ. ಅಶೋಕ್, ಕಾಲೇಜಿನ ಪ್ರಾಂಶುಪಾಲರಾದ ಡಾ.ಜಗದೀಶ ಜಿ.ಟಿ. ವಿವೇಕಾನಂದ ಅಧ್ಯಯನ ಕೇಂದ್ರದ ಸಂಚಾಲಕರಾದ ರಮ್ಯ ಕಲ್ಲೂರು, ಶ್ರೀನಿಧಿ ಕಾಲೇಜಿನ ಅಧ್ಯಾಪಕರು,ವಿದ್ಯಾರ್ಥಿಗಳು, ರಾಜ್ಯ ಹಾಗೂ ಹೊರ ರಾಜ್ಯದ ವಿದ್ಯಾರ್ಥಿಗಳು ಅಧ್ಯಾಪಕರು ಭಾಗವಹಿಸಿದ್ದರು.



ತುಮಕೂರಿನ ರಾಮಕೃಷ್ಣಾಶ್ರಮ-ಶೇಷಾದ್ರಿಪುರಂ ಕಾಲೇಜು ವಿವೇಕಾನಂದ ಅಧ್ಯಯನ ಕೇಂದ್ರದ ಸಹಯೋಗದಲ್ಲಿ ನಡೆದ ಯುವ ಸಮ್ಮೇಳನಕ್ಕೆ ಚಾಲನೆ ವೇಳೆ ರಾಮಕೃಷ್ಣಾಶ್ರಮದ ಯತಿಗಳು, ನಾಡೋಜ, ಡಾ.ವೂಡೆ.ಪಿ.ಕೃಷ್ಣ, ಡಬ್ಲ್ಯೂ. ಡಿ.ಅಶೋಕ್, ಡಾ.ಜಗದೀಶ ಜಿ.ಟಿ. ಇತರರಿದ್ದರು.

### ಶಿಕ್ಷಕ ನಿದ್ರೆಗೆ ಜಾರಿದರೆ ವಿದ್ಯಾರ್ಥಿ ಸತ್ತಂತೆ

ತುಮಕೂರು ವಿಶ್ವವಿದ್ಯಾನಿಲಯದ ಕುಲಪತಿ ಡಾ.ವೆಂಕಟೇಶ್ವರಲು ಮಾತನಾಡಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯು ಸ್ವಾತಂತ್ರ್ಯ ಪೂರ್ವದಿಂದಲೂ ಗುಣಮಟ್ಟದ ಶಿಕ್ಷಣ ಕೊಡುತ್ತಿದ್ದು ಶಿಕ್ಷಕ ಸದಾ ಜಾಗೃತನಾಗಿರಬೇಕು. ಸದಾ ಜಾಗೃತನಾಗಿರಬೇಕಾದ ಶಿಕ್ಷಕ ನಿದ್ರೆಗೆ ಜಾರಿದರೆ ವಿದ್ಯಾರ್ಥಿ ಸತ್ತಂತೆ. ಅಧ್ಯಾಪಕರಿಗೆ ಸರ್ವಪಲ್ಲಿ ಡಾ.ರಾಧಾಕೃಷ್ಣನ್ ಮಾದರಿಯಾದರೆ ಯುವಕರಿಗೆ ವಿವೇಕಾನಂದರು ಮಾದರಿಯಾಗಿದ್ದಾರೆ. ಇಡೀ ಭಾರತ ಅವತ್ತು ಯುವ ಸಮೂಹವನ್ನು ಹೊಂದಿದೆ. ಅನೇಕ ಸಮಸ್ಯೆಗಳಿಗೆ ಉನ್ನತ ಶಿಕ್ಷಣ ಪರಿಹಾರ ಸಾಧನವೆನಿಸಿದೆ ಎಂದರು.

### ಗಾಂಧಿ, ವಿವೇಕಾನಂದ ದೇಶದ ಮಾರ್ಗದರ್ಶಕರು

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿಗಳಾದ ನಾಡೋಜ ಡಾ.ವೂಡೇ. ಪಿ ಕೃಷ್ಣ ಮಾತನಾಡಿ ಸತ್ಯಮಾರ್ಗದಲ್ಲಿ ನಡೆದ ಮಹಾತ್ಮಗಾಂಧೀಜಿ, ಆಧ್ಯಾತ್ಮದ ಅಮೃತಮಾರ್ಗ ತೋರಿದ ಸ್ವಾಮಿ ವಿವೇಕಾನಂದರು ಭವ್ಯ ಭಾರತದ ಮಾರ್ಗದರ್ಶಕರೆನಿಸಿದ್ದಾರೆ. ವಿದ್ಯಾರ್ಥಿಗಳು ಜೀವನದಲ್ಲಿ ಶ್ರದ್ಧೆಯನ್ನು ರೂಢಿಸಿಕೊಳ್ಳಬೇಕು. ವಿವೇಕಾನಂದರ ಬರವಣಿಗೆಗಳನ್ನು ಓದಿ ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡು ಸಾಗಬೇಕು ಉಪನ್ಯಾಸಗಳಲ್ಲಿ ಅಭ್ಯಾಸ ರೂಢಿಸಿಕೊಂಡು ಸಮಾಜಕ್ಕೆ ಉತ್ತಮ ಪ್ರಜೆಗಳಾಗಬೇಕು ಎಂದು ಆಶಿಸಿದರು.

ಪ್ರತಿ ನಿಧಿ

17-08-2022 ಬುಧವಾರ




ಬೆಂಗಳೂರು: ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಸ್ವಾತಂತ್ರ್ಯ ದಿನಾಚರಣೆಯ ಅಮೃತ ಮಹೋತ್ಸವ ಜರುಗಿತು. ಮುಖ್ಯ ಅತಿಥಿಗಳಾಗಿ ಇಸ್ರೋ ಮಾಜಿ ಅಧ್ಯಕ್ಷ ಪದ್ಮಶ್ರೀ ಡಾ.ಎ.ಎಸ್. ಕಿರಣ್ ಕುಮಾರ್, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳ ಅಧ್ಯಕ್ಷ ಎನ್.ಪಂಡಿತಾರಾಧ್ಯ, ಗಾಂಧಿ ಭವನದ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ, ಆಯೋಜಕ ಪ್ರೊ.ಆರ್.ವಿ.ಮಂಜುನಾಥ್ ಮುಂತಾದವರು ಹಾಜರಿದ್ದರು.

ವಿಜಯವಾಣಿ
VIJAYAVANI BENGALURU
ಮಂಗಳವಾರ 16 ಆಗಸ್ಟ್ 2022
16 AUGUST 2022



# ಸ್ವಾತಂತ್ರ್ಯ ಅಮೃತ ಮಹೋತ್ಸವ



ವಿಜಯವಾಣಿ ಚಿತ್ರ

ಶೇಷಾದ್ರಿಪುರಂ ಸಮೂಹ ಶಿಕ್ಷಣ ಸಂಸ್ಥೆ ಹಮ್ಮಿಕೊಂಡಿದ್ದ ಸ್ವಾತಂತ್ರ್ಯ ಅಮೃತ ಮಹೋತ್ಸವದಲ್ಲಿ ರಾಮಕೃಷ್ಣ ಮಠದ ಉಪಾಧ್ಯಕ್ಷ ಸ್ವಾಮಿ ಗೌತಮಾನಂದ, ನಾಡೋಜ ಡಾ. ವೂಡೇ ಪಿ.ಕೃಷ್ಣ ಇತರರಿದ್ದರು.

ಪ್ರಜಾ ಪ್ರಗತಿ



## ಮಹಾತ್ಮ ಗಾಂಧಿ ಮತ್ತು ಸ್ವಚ್ಛ ಭಾರತ

....20ನೇ ಪುಟದಿಂದ

4.7 ಪಟ್ಟು ಹೆಚ್ಚಿದೆ. ನೈರ್ಮಲ್ಯೀಕರಣಕ್ಕೆ ಬಂಡವಾಳ ಹೂಡುವ ವಿಷಯಕ್ಕೆ ಸಂಬಂಧಿಸಿದಂತೆ ಇದು ಅತ್ಯಂತ ಸಂತಸದ ವಿಷಯ.

ಸ್ವಚ್ಛ ಭಾರತ ಮಿಶನ್‌ಗಾಗಿ ಸುಮಾರು 20 ಮಿಲಿಯನ್ ಡಾಲರ್ ಆಯವ್ಯಯವನ್ನು ಮೀಸಲಿಡಲಾಗಿದೆ. (ರಾಜ್ಯ ಮತ್ತು ಕೇಂದ್ರ ಸರ್ಕಾರಗಳೆರಡೂ ಸೇರಿ). ಖಾಸಗಿ ವಲಯ, ಸಂಘ ಸಂಸ್ಥೆಗಳು, ಧಾರ್ಮಿಕ ಸಂಸ್ಥೆಗಳು ಮತ್ತು ಸಾರ್ವಜನಿಕರಿಂದ ಹೆಚ್ಚುವರಿ ಬಂಡವಾಳ ಹರಿದು ಬರುತ್ತಿದೆ.

ಸ್ವಚ್ಛ ಭಾರತ ಮಿಶನ್ ಈಗಾಗಲೇ ಫಲ ನೀಡಲು ಪ್ರಾರಂಭಿಸಿದೆ. ಈ ಯೋಜನೆಯು ಬಯಲು ಶೌಚ ಮಾಡುವವರ ಸಂಖ್ಯೆಯನ್ನು ಅತಿ ಕಡಿಮೆ ಮಟ್ಟಕ್ಕೆ ಅಂದರೆ 30 ಕೋಟಿಗೆ ಇಳಿಸುವಲ್ಲಿ ಯಶಸ್ವಿಯಾಗಿದೆ. ಈಗಾಗಲೇ 68% ಭಾರತೀಯರಿಗೆ ಸುರಕ್ಷಿತ ನೈರ್ಮಲ್ಯ ವ್ಯವಸ್ಥೆ ಕಲ್ಪಿಸಲಾಗಿದೆ.

ಇವತ್ತಿಗೂ ಹಲವು ಕಡೆ ಕೈಯಿಂದ ಕಲ್ಮಶ ಸಂಗ್ರಹಿಸುವ ವರದಿಗಳು ಬರುತ್ತಿದ್ದು, ಅದಕ್ಕಿನ್ನೂ ಪರಿಹಾರವೇ ಸಿಕ್ಕಿಲ್ಲ. 'ಸಾರ್ವಜನಿಕ ರಸ್ತೆಗಳು ಮತ್ತು ಒಣ ಶೌಚಾಲಯಗಳಿಂದ ಮಾನವರ ಕಲ್ಮಶ ವಿಸರ್ಜನೆಯನ್ನು ಸಂಗ್ರಹಣೆ ಮಾಡುವುದು, ಸೆಪ್ಟಿಕ್ ಟ್ಯಾಂಕ್, ಚರಂಡಿ ಮತ್ತು ಕಾಲುವೆಗಳನ್ನು ಸ್ವಚ್ಛಗೊಳಿಸುವುದು' ಇವು, ಮನುಷ್ಯರು ಯಾವುದೇ ಉಪಕರಣಗಳ ಸಹಾಯವಿಲ್ಲದೇ ಕೈಯಿಂದ ಮಾಡುವುದು ಅತಿ ಕೆಟ್ಟ ಪದ್ಧತಿ. ಈ ಕೆಟ್ಟ ಪದ್ಧತಿಯು ಭಾರತದಲ್ಲಿನ್ನೂ ಅಸ್ತಿತ್ವದಲ್ಲಿ ಇರುವುದು ವಿಷಾದನೀಯ ಸಂಗತಿ. ಇದಕ್ಕೆ ಮುಖ್ಯ ಕಾರಣ ಜಾತಿ ಮತ್ತು ವರ್ಗ ತಾರತಮ್ಯ. ದೇಶದಲ್ಲಿ ಮಲಸಂಗ್ರಹ ಕಾರ್ಯದಲ್ಲಿರುವವರೆಲ್ಲ ದಲಿತರೇ. ಅದರಲ್ಲೂ ಕೆಳಹಂತದಲ್ಲಿರುವ ದಲಿತರು ಅಥವಾ ತುಳಿತಕ್ಕೊಳಗಾದ ದಲಿತ ಉಪಜಾತಿಯವರು.

ಜಾತಿ ಆಧಾರಿತವಾದ ಹಾಗೂ ಬಲವಾಗಿ ಬೇರೂರಿದ ಕೈಯಿಂದ ಕಲ್ಮಶ ತೆಗೆಯುವ ಪದ್ಧತಿಯು ನಮ್ಮ ಸಾರ್ವಜನಿಕ ನೀತಿಯ ಒಂದು ಭಾಗವಾಗಿದೆ. ಸ್ವಚ್ಛ ಭಾರತ ಮಿಶನ್‌ನ ಯಶಸ್ಸು ಬಹುಮಟ್ಟಿಗೆ ಈ ಪದ್ಧತಿಯ ನಿವಾರಣೆಯ ಮೇಲೆಯೇ ಅವಲಂಬಿಸಿದೆ. ಆದ್ದರಿಂದ ಸ್ವಚ್ಛ ಭಾರತದ ನಾಲ್ಕು ಮುಖ್ಯ ಗುರಿಗಳು ಸ್ಪಷ್ಟವಾಗಿವೆ. ಬಯಲು ಶೌಚ ಮುಕ್ತಗೊಳಿಸುವುದು, ಬರಿಗೈಯಿಂದ ಕಲ್ಮಶ ಸಂಗ್ರಹಣೆ ಮಾಡುವ ಪದ್ಧತಿಯ ನಿರ್ಮೂಲನೆ, ಆಧುನಿಕ ಹಾಗೂ ವೈಜ್ಞಾನಿಕ ಪದ್ಧತಿಯಿಂದ ಘನ ತ್ಯಾಜ್ಯ ನಿರ್ವಹಣೆ ಮಾಡುವುದು, ಆರೋಗ್ಯಕರ ನೈರ್ಮಲ್ಯ ಅಭ್ಯಾಸ ಕುರಿತಂತೆ ನಡವಳಿಕೆಯಲ್ಲಿ ಬದಲಾವಣೆ ತರುವುದು. ಆದರೆ ಎಲ್ಲ ಪ್ರಯತ್ನ ಮತ್ತು ಸಂಪನ್ಮೂಲಗಳು ಮೊದಲನೆಯದರ ಮೇಲೆ ಕೇಂದ್ರೀಕೃತವಾಗಿವೆ. ಆದರೆ ಕೈಯಿಂದ ಕಲ್ಮಶ ಸ್ವಚ್ಛ ಮಾಡುವ ಪದ್ಧತಿಯ ನಿರ್ಮೂಲನೆ, ಆ ಕೆಲಸಗಾರರ ಪುನರ್ವಸತಿ ಹಾಗೂ ಇದಕ್ಕೆ ಸಂಬಂಧಿಸಿದ ಘನ ತ್ಯಾಜ್ಯ ನಿರ್ವಹಣೆ ಬಗ್ಗೆ ಯಾರೂ ಆಸಕ್ತಿಯನ್ನು ತೋರಿಸುತ್ತಿಲ್ಲ. ಈಗ ಬಹಳ ದೊಡ್ಡ ಪ್ರಮಾಣದಲ್ಲಿ ಶೌಚಾಲಯಗಳು ನಿರ್ಮಾಣವಾಗುತ್ತಿವೆ. ಆದರೆ ಅವುಗಳನ್ನು ಸ್ವಚ್ಛ ಮಾಡುವ ಬಗ್ಗೆ ಒಂದು ನಿರ್ದಿಷ್ಟ ಕಾರ್ಯತಂತ್ರದ ಕೊರತೆ ಎದ್ದು ಕಾಣುತ್ತಿದೆ. ಶೌಚವನ್ನು ವೈಜ್ಞಾನಿಕ ಪದ್ಧತಿಯಲ್ಲಿ ವಿಸರ್ಜಿಸುವ ಬಗ್ಗೆ ಹಾಗೂ ಶೌಚಾಲಯಗಳಿಗೆ ನಿರಂತರ ನೀರಿನ ಸೌಲಭ್ಯ ಒದಗಿಸುವ ಬಗ್ಗೆ ಕಾಳಜಿ ತೋರಿಸಲಾಗುತ್ತಿಲ್ಲ. ಮಾನವ ಮಲಸಂಗ್ರಹಣೆ ಪದ್ಧತಿಯ ನಿರ್ಮೂಲನೆಗೆ ತಂತ್ರಜ್ಞಾನಾಧಾರಿತ ಉಪಕರಣಗಳನ್ನು ಉಪಯೋಗಿಸಲು ಬಂಡವಾಳವೇ ಇಲ್ಲದ ಪರಿಸ್ಥಿತಿ ಇದೆ.

ಈ ಯೋಜನೆಯಿಂದಾದ ಅತ್ಯಂತ ಪ್ರಮುಖ ಲಾಭ ಮತ್ತು ಅನುಕೂಲವೆಂದರೆ ಹೆಣ್ಣು ಮಕ್ಕಳ ಶಿಕ್ಷಣದಲ್ಲಿ ಅಭಿವೃದ್ಧಿ ಆಗಿರುವುದು. ಈ ಹಿಂದೆ ಹಳ್ಳಿಗಳ ಶಾಲೆಗಳಲ್ಲಿ ಶೌಚಾಲಯ ವ್ಯವಸ್ಥೆ ಇಲ್ಲದ ಕಾರಣ, ಹೆಣ್ಣು ಮಕ್ಕಳು ಶಾಲೆಗೆ ಹೋಗಲು ಹಿಂದೇಟು ಹಾಕುತ್ತಿದ್ದರು. ಈಗ ಶಾಲೆಯ ಆವರಣದಲ್ಲಿಯೇ ಶೌಚಾಲಯಗಳು ನಿರ್ಮಾಣವಾದ ಕಾರಣ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳು ಶಾಲೆಗೆ ಬರುತ್ತಿದ್ದಾರೆ. ಹಾಗೂ ಮಧ್ಯದಲ್ಲಿಯೇ ಶಾಲೆ ಬಿಡುವವರ ಸಂಖ್ಯೆಯೂ ನಿಧಾನವಾಗಿ ಇಳಿಮುಖವಾಗುತ್ತಿದೆ.

ನಾವೀಗಾಗಲೇ ಒಂದಿಷ್ಟು ಸಾಧನೆ ಮಾಡಿದ್ದರೂ ಸಹ ಮುಂದೆ ಮಾಡಬೇಕಾದ ಹಾಗೂ ಮಾಡದೇ ಉಳಿದ ಕೆಲಸಗಳು ತುಂಬಾ ಇವೆ. ಯೋಜನೆ ಮತ್ತು ಅನುಷ್ಠಾನದ ನಡುವೆ ಸಂಪರ್ಕ ವಿರಬೇಕು. ಮೌಲ್ಯಮಾಪನ ವರದಿಗಳು ನಿಖರವಾಗಿರಬೇಕು ಹಾಗೂ ಕ್ಷೇತ್ರ ಮಟ್ಟದ ವಸ್ತು ಸ್ಥಿತಿಗೆ ಆಧಾರವಾಗಿ ತಯಾರಾಗಬೇಕು. ಜೊತೆಗೆ ಎಲ್ಲ ಪಾಲುದಾರರನ್ನೂ ಈ ಯೋಜನೆಯ ಅನುಷ್ಠಾನದಲ್ಲಿ ಭಾಗಿಯಾಗಿಸುವುದು ಅತ್ಯಗತ್ಯ. ಅಂತೂ, ಭಾರತದ ಕಾರ್ಪೋರೇಟ್ ಜಗತ್ತು ತನ್ನ ನಿದ್ರೆಯಿಂದ ಎಚ್ಚೆತ್ತುಕೊಂಡಿದ್ದು ದೊಡ್ಡ ಸಮಾಧಾನದ ಸಂಗತಿ. ಸ್ವಚ್ಛ ಭಾರತ ನಿಧಿಗೆ ಅವರು ನೀಡುತ್ತಿರುವ ಕೊಡುಗೆಯಿಂದಾಗಿ ಸಂಪೂರ್ಣ ಕಾರ್ಯಕ್ರಮಕ್ಕೆ ಒಂದು ಚಾಲನಾ ಶಕ್ತಿ ದೊರೆತಂತಾಗಿದೆ. ಅಲ್ಲದೇ, ಸಿ.ಎಸ್.ಆರ್‌ನ ಪರಿಕಲ್ಪನೆಗೆ ಹೆಚ್ಚು ಮೌಲ್ಯ ಒದಗಿಸಿದಂತಾಗಿದೆ. ಮಹಾತ್ಮ ಗಾಂಧಿ ಅವರ ನೆನಪು ಮತ್ತು ಆದರ್ಶಗಳು ಇತರ ಸಾರ್ವಜನಿಕ ಕ್ಷೇತ್ರಗಳಲ್ಲಿಯೂ ಸಹ ಸಾಧನೆಗೆ ಪ್ರೇರಣೆಯಾದರೆ, ಅವರ 150ನೇ ಜನ್ಮದಿನಾಚರಣೆಯನ್ನು ಹೆಚ್ಚು ಅರ್ಥಪೂರ್ಣವಾಗಿ ನಾವು ಆಚರಿಸಿದಂತಾಗುತ್ತದೆ. ■

### ಲಿಂಗಭೇದ

ಈ ಕೆಲಸದಲ್ಲಿಯೂ ಲಿಂಗ ಭೇದ ಸ್ಪಷ್ಟವಾಗಿ ಕಾಣುತ್ತದೆ. ಮಹಿಳಾ ಕೆಲಸಗಾರರೇ ಹಳ್ಳಿ ಮತ್ತು ನಗರ ಪ್ರದೇಶಗಳಲ್ಲಿ ಶೌಚಾಲಯದಿಂದ ಮಲ ಸಂಗ್ರಹಣೆ, ಸ್ವಚ್ಛತೆ ಮತ್ತು ಮಲ ಹೊತ್ತೊಯ್ಯುವ ಕೆಲಸದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತಾರೆ. ಈ ಕೆಲಸಕ್ಕೆ ನೀಡುವ ಕೂಲಿ ಸಹ ಅತ್ಯಂತ ಕಡಿಮೆ. ದಾಖಲೆಗಳು ಹೇಳುವಂತೆ, ತಿಂಗಳಿಗೆ 150 ರೂಪಾಯಿಗಳು ಅಥವಾ ದಿನಕ್ಕೆ ಒಂದೋ ಎರಡೋ ರೊಟ್ಟಿ ಕೊಡುವುದು ರೂಢಿಯಲ್ಲಿದೆ. ಪುರುಷರು ಸೆಪ್ಟಿಕ್ ಟ್ಯಾಂಕ್, ಕಾಲುವೆ, ಚರಂಡಿ ಸ್ವಚ್ಛಗೊಳಿಸುತ್ತಾರೆ. ಇವೆರಡೂ ಸಹ ಅಹಿತಕರ, ಅನಾರೋಗ್ಯಕರ ಮತ್ತು ಜೀವವನ್ನೇ ಪಣಕ್ಕಿಡುವಂಥಹ ಕೆಲಸಗಳಾಗಿವೆ. ಮೇಲ್ನೋಟಕ್ಕೆ, ಈ ಪದ್ಧತಿಯ ಅಸ್ತಿತ್ವಕ್ಕೆ ಕಾರಣವಾದ ಮೂಲ ಅಪರಾಧಿಗಳು ಖಾಸಗಿಯವರಲ್ಲ. ಬದಲಿಗೆ, ಸಾರ್ವಜನಿಕ ವಲಯದವರು. ಉದಾಹರಣೆಗೆ ಭಾರತೀಯ ರೈಲ್ವೆಯು ಈ ಕೆಲಸ ಮಾಡುವವರಿಗಾಗಿ ಅತಿ ದೊಡ್ಡ ಉದ್ಯೋಗವಕಾಶ ಕಲ್ಪಿಸುತ್ತಿದೆ. ಇದರ ಪ್ರಮಾಣವನ್ನು ಕಂಡುಹಿಡಿಯುವುದು ಕಷ್ಟದ ವಿಷಯ. ಏಕೆಂದರೆ ಇಂದಿಗೂ ಸಹ ಬಹುತೇಕ ರೈಲುಗಳಲ್ಲಿ ಶೌಚ ವಿಲೇವಾರಿ ಮಾಡಲು ಬಹಳಷ್ಟು ಕೆಲಸಗಾರರು ಕಾಂಟ್ರಾಕ್ಟರ್‌ಗಳ ಮುಖಾಂತರ ಬರುತ್ತಾರೆ. ಅವರ ಆದಾಯ ದಿನಕ್ಕೆ ಸುಮಾರು 200 ರೂಪಾಯಿಗಳು. ಕೈಗೆ ಧರಿಸಲು ಗ್ಲೌಸ್ ಸಿಕ್ಕರೆ ಅದೇ ಅದೃಷ್ಟ ಅವರಿಗೆ ದೊರಕುವ ರಕ್ಷಣಾ ಸೌಲಭ್ಯಗಳೂ ಸಹ ಇಲ್ಲವೆನ್ನುವಷ್ಟು ಕಡಿಮೆ. ಇಲ್ಲಿಯವರೆಗೆ ಅಂದಾಜು 1/3ರಷ್ಟು ಬೋಗಿಗಳು ಮಾತ್ರ ಆಧುನಿಕ ಜೈವಿಕ ಶೌಚಾಲಯವನ್ನು ಹೊಂದಿವೆ.

ಸಂಜೆವಾಣಿ

ಶುಕ್ರವಾರ 12 ಆಗಸ್ಟ್ 2022



ನಗರದ ಶೇಷಾದ್ರಿಪುರಂನ ಸಂಜೆ ಪದವಿ ಪೂರ್ವ ಕಾಲೇಜಿನಲ್ಲಿ ನಡೆದ ಪ್ರತಿಭಾ ಪುರಸ್ಕಾರ ಸಮಾರಂಭವನ್ನು ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ. ಕೃಷ್ಣ ಉದ್ಘಾಟಿಸಿದರು. ಡಾ. ಸುಂದರ್‌ರಾಜ್ ಅರಸು, ದತ್ತಿಯ ಅಧ್ಯಕ್ಷ ಪಂಡಿತಾರಾಧ್ಯ, ಧರ್ಮದರ್ಶಿಗಳಾದ ಪರಮಶಿವಯ್ಯ, ವೀರಭದ್ರಯ್ಯ, ಪ್ರಾಂಶುಪಾಲರಾದ ಮಹಾಲಕ್ಷ್ಮೀ ಇದ್ದಾರೆ.

ಉದಯ ಮಿತ್ರ

10/08/2022

# ಗ್ರಾಮೀಣ ಬದುಕು ಕಲಿಯಲು ಎನ್‌ಎಸ್‌ಎಸ್ ಸಹಕಾರಿ



ದೇವನಹಳ್ಳಿ : ಶೌಚಾಲಯಗಳಿಗೆ ಸಾರ್ವಜನಿಕರು ಕೊನೆಯ ಪ್ರಾಮುಖ್ಯತೆಯನ್ನ ನೀಡುತ್ತಾರೆ ಆದರೆ ಶೌಚಾಲಯ ನಿರ್ಮಾಣಕ್ಕೆ ಪ್ರಥಮ ಪ್ರಮುಖ್ಯತೆಯನ್ನ ನೀಡಬೇಕು ಎಂದು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿ ಶ್ರೀಮತಿ ಆರ್. ಲತಾ ಅಭಿಪ್ರಾಯ ಪಟ್ಟರು.

ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕದ ವತಿಯಿಂದ ಅಮೃತಾ ಸಮುದಾಯ ಅಭಿವೃದ್ಧಿ ಯೋಜನೆಯಲ್ಲಿ ದತ್ತು ಪಡೆದ ದೇವನಹಳ್ಳಿ ತಾಲೂಕಿನ ಆವತಿ ಗ್ರಾ.ಪಂ ಗೊಬ್ಬರಗುಂಟೆ ಗ್ರಾಮದ ಸರ್ಕಾರಿ ಪ್ರಾಥಮಿಕ ಶಾಲೆಯ ಆವರಣದಲ್ಲಿ ಸ್ವಯಂಸೇವಕರಿಂದ ನಿರ್ಮಿಸಿದ ಶೌಚಾಲಯ ಗಳ ಉದ್ಘಾಟನೆ ಮತ್ತು ನಾಲ್ಕು ದಿನಗಳ ಎನ್‌ಎಸ್‌ಎಸ್ ವಿಶೇಷ ಶಿಬಿರವನ್ನ ಉದ್ಘಾಟಿಸಿ ಮಾತನಾಡಿದರು.

ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ಎನ್ ಎಸ್ ಎಸ್ ಸ್ವಯಂ ಸೇವಕರು ಗ್ರಾಮೀಣ ಭಾಗದಲ್ಲಿ ವಿಶೇಷ ಶಿಬಿರಗಳನ್ನು ಹಮ್ಮಿಕೊಂಡು, ಗ್ರಾಮೀಣ ಭಾಗ ದ ಜನತೆಯಲ್ಲಿ ಅನೇಕ ಜಾಗೃತಿ ಕಾರ್ಯಕ್ರಮ ಗಳನ್ನು ಹಮ್ಮಿಕೊಳ್ಳುತ್ತಾ ಗ್ರಾಮಸ್ಥರ ಮನೆಗೆದ್ದಿ ದ್ದಾರೆ. ಶಾಲೆಯ ಆವರಣದಲ್ಲಿ ಶೌಚಾಲಯ ಗಳನ್ನು ನಿರ್ಮಿಸಿ ಶಾಲೆಗೆ ಕೊಡುಗೆ ನೀಡಿರು ವುದು ಶ್ಲಾಘನೀಯ ವಿಚಾರ ಎಂದ್ದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನ ವಹಿಸಿ ಮಾತನಾಡಿದ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ.ವೂಡೇ.ಪಿ ಕೃಷ್ಣ ರವರು ಗ್ರಾಮೀಣ ಭಾರತದ ಕಲ್ಪನೆ, ಗ್ರಾಮೀಣ ಭಾಗದ ಪರಿಸರ ಉತ್ತಮವಾದಗ ನಮ್ಮ ಬದುಕು ಹಸನಾಗುತ್ತದೆ, ಭಾರತದ ಆತ್ಮ ಇರುವುದು ಗ್ರಾಮೀಣ ಪ್ರದೇಶ ದಲ್ಲಿ ಎಂದು ಗಾಂಧೀಜಿ ಅವರ ಪರಿಕಲ್ಪನೆ ಆಗಿತ್ತು ಎಂದರು, ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಹಮ್ಮಿಕೊಳ್ಳುತ್ತಿರುವ ವಿವಿಧ ಕಾರ್ಯಕ್ರಮಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು.

ಇದೇ ಸಂದರ್ಭದಲ್ಲಿ ಗ್ರಾಮದ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಿಗೆ ಪುಸ್ತಕ ಮತ್ತು ಕಲಿಕಾ ಸಾಮಗ್ರಿಗಳನ್ನು ವಿತರಿಸಲಾಯಿತು.

ಕಾರ್ಯಕ್ರಮದಲ್ಲಿ ರಾಜ್ಯ ಎನ್‌ಎಸ್‌ಎಸ್ ಅಧಿಕಾರಿ ಪ್ರತಾಪ್ ಲಿಂಗಯ್ಯ, ದೇವನಹಳ್ಳಿ ದಂಡಾಧಿಕಾರಿ ಶಿವರಾಜ, ಬೆಂಗಳೂರು ನಗರ ವಿಶ್ವವಿದ್ಯಾಲಯದ ಎನ್ ಎಸ್ ಎಸ್ ಸಂಯೋ ಜನಾಧಿಕಾರಿ ಡಾ. ಎಚ್. ಜಿ. ಗೋವಿಂದ ಗೌಡ, ಆವತಿ ಪಂಚಾಯಿತಿ ಅಧ್ಯಕ್ಷ ಮಂಜುನಾಥ್, ಪ್ರಾಂಶುಪಾಲರಾದ ಡಾ.ಎಸ್. ಎನ್. ವೆಂಕಟೇಶ್, ಎನ್‌ಎಸ್‌ಎಸ್ ಅಧಿಕಾರಿ ನವೀನ್ ಕುಮಾರ್. ಕೆ.ಎಸ್, ನೆಹರು ಯುವ ಕೇಂದ್ರದ ಪ್ರಶಾಂತ್, ಹೆಚ್.ಜಿ.ಗೋಪಾಲಗೌಡ, ಪಂಚಾಯಿತಿ ಸದಸ್ಯರು, ಗ್ರಾಮಸ್ಥರು ಹಾಜರಿದ್ದರು.

ಪ್ರಜಾ ಪ್ರಗತಿ

Aug 10, 2022

# ಗ್ರಾಮೀಣ ಬದುಕು ಕಲಿಯಲು ಎನ್‌ಎಸ್‌ಎಸ್ ಸಹಕಾರಿ: ಡಿಸಿ



■ ಪ್ರಜಾ ಪ್ರಗತಿ ಕಾಂ

ಗ್ರಾಮೀಣ ಭಾರತದ ಕಲ್ಪನೆ, ಗ್ರಾಮೀಣ ಭಾಗದ ಪರಿಸರ ಉತ್ತಮವಾದಗ ನಮ್ಮ ಬದುಕು ಹಸನಾಗುತ್ತದೆ, ಭಾರತದ ಆತ್ಮ ಇರುವುದು ಗ್ರಾಮೀಣ ಪ್ರದೇಶದಲ್ಲಿ ಎಂದು ಗಾಂಧೀಜಿ ಅವರ ಪರಿಕಲ್ಪನೆ ಆಗಿತ್ತು ಎಂದರು, ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಹಮ್ಮಿಕೊಳ್ಳುತ್ತಿರುವ ವಿವಿಧ ಕಾರ್ಯಕ್ರಮಗಳ ಬಗ್ಗೆ ಮೆಚ್ಚುಗೆ.

■ ಡಾ.ಪ್ರೊ. ಪಿ.ಕೃಷ್ಣ.

ವಿಜಯಪುರ: ಶೌಚಾಲಯಗಳಿಗೆ ಸಾರ್ವಜನಿಕರು ಹೊಸಿಯ ಪ್ರಾಮುಖ್ಯತೆಯನ್ನ ನೀಡುತ್ತಾರೆ ಆದರೆ ಶೌಚಾಲಯ ನಿರ್ಮಾಣಕ್ಕೆ ಪ್ರಥಮ ಪ್ರಮುಖ್ಯತೆಯನ್ನ ನೀಡಬೇಕು ಎಂದು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿ ಶ್ರೀಮತಿ ಆರ್. ಲತಾ ಅಭಿಪ್ರಾಯ ಪಟ್ಟರು.

ಇವರು ಸಮೀಪದ ಅವತಿ ಗ್ರಾಮ ಪಂಚಾಯಿತಿಯ ಗೊಬ್ಬರಗುಂಟೆ ಗ್ರಾಮದ ಸರಕಾರಿ ಪ್ರಾಥಮಿಕ ಶಾಲೆಯ ಆವರಣದಲ್ಲಿ ಯಲಹಂಕ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ ಘಟಕದ ವತಿಯಿಂದ ಅಮೃತಾ ಸಮುದಾಯ ಅಭಿವೃದ್ಧಿ ಯೋಜನೆಯಲ್ಲಿ ದತ್ತು ಸ್ವಯಂಸೇವಕರಿಂದ ನಿರ್ಮಿಸಿದ ಶೌಚಾಲಯಗಳ ಉದ್ಘಾಟನೆ ಮತ್ತು ನಾಲ್ಕು ದಿನಗಳ ಎನ್‌ಎಸ್‌ಎಸ್ ವಿಶೇಷ ಶಿಬಿರವನ್ನ ಉದ್ಘಾಟಿಸಿ ಮಾತನಾಡಿದರು.

ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ಎನ್ ಎಸ್ ಎಸ್ ಸ್ವಯಂ ಸೇವಕರು ಗ್ರಾಮೀಣ ಭಾಗದಲ್ಲಿ ವಿಶೇಷ ಶಿಬಿರಗಳನ್ನು ಹಮ್ಮಿಕೊಂಡು, ಗ್ರಾಮೀಣ ಭಾಗದ ಜನತೆಯಲ್ಲಿ ಅನೇಕ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಗ್ರಾಮಸ್ಥರ ಮನಗೆದ್ದಿದ್ದಾರೆ.

ಶಾಲೆಯ ಆವರಣದಲ್ಲಿ ಶೌಚಾಲಯಗಳನ್ನು ನಿರ್ಮಿಸಿ ಶಾಲೆಗೆ ಕೊಡುಗೆ ನೀಡಿರುವುದು ಶ್ಲಾಘನೀಯ ವಿಚಾರ ಎಂದು ಹರ್ಷ ವ್ಯಕ್ತಪಡಿಸಿದ್ದರು.

ಇದೇ ಸಂದರ್ಭದಲ್ಲಿ ಗ್ರಾಮದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಿಗೆ ಪುಸ್ತಕ ಮತ್ತು ಕಲಿಕಾ ಸಾಮಗ್ರಿಗಳನ್ನು ವಿತರಿಸಲಾಯಿತು.

ಕಾರ್ಯಕ್ರಮದಲ್ಲಿ ರಾಜ್ಯ ಎನ್‌ಎಸ್‌ಎಸ್ ಅಧಿಕಾರಿ ಪ್ರತಾಪ್ ಲಿಂಗಯ್ಯ, ದೇವನಹಳ್ಳಿ ದಂಡಾಧಿಕಾರಿ ಶಿವರಾಜ, ಬೆಂಗಳೂರು ನಗರ ವಿಶ್ವವಿದ್ಯಾಲಯದ ಎನ್ ಎಸ್ ಎಸ್ ಸಂಯೋಜನಾಧಿಕಾರಿ ಡಾ. ಎಚ್ . ಜಿ. ಗೋವಿಂದ ಗೌಡ, ಅವತಿ ಪಂಚಾಯಿತಿ ಅಧ್ಯಕ್ಷ ಮಂಜುನಾಥ್. ಪ್ರಾಂಶುಪಾಲರಾದ ಡಾ.ಎಸ್. ಎನ್. ವೆಂಕಟೇಶ್, ಎನ್‌ಎಸ್‌ಎಸ್ ಅಧಿಕಾರಿ ನವೀನ್ ಕುಮಾರ್. ಕೆ.ಎಸ್, ನೆಹರು ಯುವ ಕೇಂದ್ರದ ಪ್ರಶಾಂತ್, ಹೆಚ್.ಜಿ. ಗೋಪಾಲಗೌಡ, ಪಂಚಾಯತಿ ಸದಸ್ಯರು. ಗ್ರಾಮಸ್ಥರು ಹಾಜರಿದ್ದರು.

ಪ್ರಜಾವಾಣಿ
ಬುಧವಾರ ○ ಆಗಸ್ಟ್ 3, 2022

# ರಾಜಕಾರಣಿಗಳ ಮಾತಿನ ಇರಿತವೂ ಹಿಂಸೆ: ಹಂಪನಾ

ಪ್ರಜಾವಾಣಿ ವಾರ್ತೆ

ಬೆಂಗಳೂರು: ಅಹಿಂಸಾ ಪರಮೋ ಧರ್ಮ ಎನ್ನುವ ಧರ್ಮವಾಕ್ಯ ಮರೆತಿರುವ ರಾಜಕಾರಣಿಗಳು, ನಿತ್ಯವೂ ಪರಸ್ಪರ ಮಾತುಗಳಲ್ಲಿ ಇರಿಯುವುದೂ ಒಂದು ರೀತಿಯ ಹಿಂಸೆ ಎಂದು ಸಾಹಿತಿ ಹಂಪ ನಾಗರಾಜಯ್ಯ ಪ್ರತಿಪಾದಿಸಿದರು.

ಶೇಷಾದ್ರಿಪುರಂ ವಾಣಿಜ್ಯ ಮತ್ತು ವ್ಯವಸ್ಥಾಪನಾ ಕಾಲೇಜಿನಲ್ಲಿ ಮಂಗಳವಾರ ಹಮ್ಮಿಕೊಂಡಿದ್ದ 'ಜೈನ ಧರ್ಮ; ಅಹಿಂಸೆಯ ಪರಿಕಲ್ಪನೆಗಳು' ಕುರಿತ ವಿಚಾರಸಂಕಿರಣ ಉದ್ಘಾಟಿಸಿ ಅವರು ಮಾತನಾಡಿದರು.

ಜಗತ್ತಿನ ಎಲ್ಲ ಧರ್ಮಗಳೂ ಅಹಿಂಸೆಗೆ ಮಹತ್ವ ನೀಡಿವೆ. ನೀನು ಬದುಕು, ಇತರರಿಗೂ ಬದುಕಲು ಬಿಡು ಎನ್ನುವುದು ಬದುಕಿನ ಧ್ಯೇಯವಾಗಬೇಕಿದೆ. ಅಹಿಂಸೆಗೆ ಹಲವು ಆಯಾಮಗಳಿವೆ. ಮಹಾವೀರ, ಬುದ್ಧ, ಗಾಂಧೀಜಿ ಅವರು ಮಹತ್ವವನ್ನು ಜಗತ್ತಿಗೆ ಸಾರಿದ್ದಾರೆ ಎಂದು ಶ್ಲಾಘಿಸಿದರು.

ಯುದ್ಧದ ಪರಿಣಾಮ ಇಂದಿಗೂ ಸಾವಿರಾರು ಜನರು ಜೀವ ಕಳೆದುಕೊಳ್ಳುತ್ತಿರುವ ಈ ಸಮಯದಲ್ಲಿ ಆಯುಧ ಬಳಸದೇ ಯುದ್ಧ ಮಾಡಬಹುದು ಎನ್ನುವುದನ್ನು ಜಗತ್ತಿಗೆ ತೋರಿಕೊಟ್ಟವರು ಭರತ ಮತ್ತು ಬಾಹುಬಲಿ ಸಹೋದರರು. ಹಣ, ಅಧಿಕಾರ ವಿವೇಕ ಮರೆಸುತ್ತದೆ ಎನ್ನುವ ನೀತಿಪಾಠ ಹೇಳಿದ್ದಾರೆ. ಆದರೂ, ಜಗತ್ತು ಪಾಠ ಕಲಿತಿಲ್ಲ ಎಂದು ವಿಷಾದಿಸಿದರು.

ಜೈನ ಸಾಹಿತ್ಯ ಸಂಸ್ಕೃತಿ ಅಧ್ಯಯನ ಕೇಂದ್ರದ ಸಂಯೋಜನಾಧಿಕಾರಿ ತಾರಿಹಳ್ಳಿ ಹನುಮಂತಪ್ಪ ಪ್ರಾಸ್ತಾವಿಕವಾಗಿ ಮಾತನಾಡಿದರು. ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಸ.ಚಿ.ರಮೇಶ ಅಧ್ಯಕ್ಷತೆ ವಹಿಸಿದ್ದರು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಕನ್ನಡ ವಿಶ್ವವಿದ್ಯಾಲಯದ ಕಾರ್ಯಕಾರಿ ಸಮಿತಿ ಸದಸ್ಯರಾದ ಸಮಿಉಲ್ಲಾಖಾನ್, ಓ.ಓಬಯ್ಯ, ಪ್ರಾಂಶುಪಾಲರಾದ ವಿದ್ಯಾ ಶಿವಣ್ಣನವರ್ ಉಪಸ್ಥಿತರಿದ್ದರು.



ಶೇಷಾದ್ರಿಪುರಂ ಕಾಲೇಜಿನಲ್ಲಿ ಮಂಗಳವಾರ ಹಮ್ಮಿಕೊಂಡಿದ್ದ 'ಜೈನ ಧರ್ಮ; ಅಹಿಂಸೆಯ ಪರಿಕಲ್ಪನೆಗಳು' ಕುರಿತ ವಿಚಾರ ಸಂಕಿರಣದಲ್ಲಿ ಕನ್ನಡ ವಿವಿ ಕಾರ್ಯಕಾರಿ ಸಮಿತಿ ಸದಸ್ಯ ಸಮಿಉಲ್ಲಾಖಾನ್, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಕುಲಪತಿ ಸ.ಚಿ.ರಮೇಶ, ಸಾಹಿತಿ ಹಂಪ ನಾಗರಾಜಯ್ಯ ಇದ್ದಾರೆ


ಕನ್ನಡಪ್ರಭ ಬುಧವಾರ 3.8.2022
ಬೆಂಗಳೂರು

# ಹಿಂಸೆ ಇಲ್ಲದೆ ಜೀವಿಸುವುದೇ ಜೈನ ಧರ್ಮದ ಗುರಿ: ಹಂಪನಾ

## 'ಜೀವಿಸು, ಜೀವಿಸಲು ಬಿಡು' ತತ್ವ ಆಧಾರಿತ ಧರ್ಮ



ಕನ್ನಡ ವಿವಿ ಜೈನ ಸಾಹಿತ್ಯ ಸಂಸ್ಕೃತಿ ಅಧ್ಯಯನ ಕೇಂದ್ರದ ಸಹಯೋಗದಲ್ಲಿ ನಗರದ ಶೇಷಾದ್ರಿಪುರ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್ ಅಂಡ್ ಮ್ಯಾನೇಜ್‌ಮೆಂಟ್ ಹಮ್ಮಿಕೊಂಡಿದ್ದ ವಿಚಾರ ಸಂಕಿರಣವನ್ನು ಹಿರಿಯ ವಿದ್ವಾಂಸ ಡಾ. ಹಂಪ ನಾಗರಾಜಯ್ಯ ಉದ್ಘಾಟಿಸಿದರು.

• **ಕನ್ನಡಪ್ರಭ ವಾರ್ತೆ** ಬೆಂಗಳೂರು

'ಅಹಿಂಸೆಯೇ ಪರಮ ಧರ್ಮ, ಹಿಂಸೆಯಿಲ್ಲದೆ ಜೀವಿಸುವುದೇ ಜೈನ ಧರ್ಮದ ಪರಮೋಚ್ಚ ಗುರಿ' ಎಂದು ಹಿರಿಯ ವಿದ್ವಾಂಸ ಡಾ| ಹಂಪ ನಾಗರಾಜಯ್ಯ ಅಭಿಪ್ರಾಯಪಟ್ಟಿದ್ದಾರೆ.

ಕನ್ನಡ ವಿಶ್ವವಿದ್ಯಾಲಯದ ಜೈನ ಸಾಹಿತ್ಯ ಸಂಸ್ಕೃತಿ ಅಧ್ಯಯನ ಕೇಂದ್ರದ ಸಹಯೋಗದಲ್ಲಿ ನಗರದ ಶೇಷಾದ್ರಿಪುರ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್ ಆ್ಯಂಡ್ ಮ್ಯಾನೇಜ್‌ಮೆಂಟ್ ಮಂಗಳವಾರ ಹಮ್ಮಿಕೊಂಡಿದ್ದ 'ಜೈನಧರ್ಮ: ಅಹಿಂಸೆಯ ಪರಿಕಲ್ಪನೆಗಳು' ರಾಷ್ಟ್ರಮಟ್ಟದ ಕುರಿತ ವಿಚಾರ ಸಂಕಿರಣದಲ್ಲಿ ಮಾತನಾಡಿದ ಅವರು, 'ಜೀವೋ ಜೀವಸ್ಯ ಜೀವಿತಃ' ಅಂದರೆ 'ಜೀವಿಸು, ಜೀವಿಸಲು ಬಿಡು' ಎಂಬ ತತ್ವದ ಮೇಲೆ ಈ ಧರ್ಮ ನಡೆಯುತ್ತಿದೆ ಎಂದರು.

ಅಹಿಂಸಾ ಧರ್ಮವನ್ನು ಉನ್ನತ ಸ್ಥಿತಿಗೆ ಕೊಂಡೊಯ್ದವರು ಜೈನರಾಗಿದ್ದಾರೆ. ಭರತ ಮತ್ತು ಬಾಹುಬಲಿ ಯುದ್ಧದಲ್ಲಿ ಸೈನಿಕರನ್ನು ಹೊರತುಪಡಿಸಿ ಅವರಿಬ್ಬರೇ ಯುದ್ಧ ಮಾಡಿದ್ದು ಕೂಡ ಅಹಿಂಸಾ ರೂಪವಾಗಿದೆ. ನಮ್ಮಿಂದ ಸೈನಿಕರು ಸಾಯಬಾರದು ಎಂಬುದು ಅಹಿಂಸೆಯ ಪ್ರತೀಕವಾಗಿತ್ತು. ಶ್ರವಣ ಬೆಳಗೊಳದಲ್ಲಿ ಇರುವ ಬಾಹುಬಲಿ ಕೂಡ ಅಹಿಂಸಾ ಧರ್ಮವನ್ನೇ ಸಾರುತ್ತಿದ್ದಾನೆ ಎಂದು ಹೇಳಿದರು.

ಶೇಷಾದ್ರಿಪುರಂ ಗೌರವ ಪ್ರಧಾನ ಕಾರ್ಯದರ್ಶಿ ಡಾ| ವೂಡೇ ಪಿ.ಕೃಷ್ಣ ಮಾತನಾಡಿ, ಗುಜರಾತಿನಲ್ಲಿ ಜೈನ ಮುನಿಗಳು ಹೆಚ್ಚಿನ ಸಂಖ್ಯೆಯಲ್ಲಿದ್ದರಿಂದ ಗಾಂಧೀಜಿ ಅವರ ತಾಯಿಯ ಮೇಲೆ ಜೈನಧರ್ಮದ ಪ್ರಭಾವ ಬೀರಿತ್ತು. ಈ ಮೂಲಕ ಮಹಾತ್ಮ ಗಾಂಧೀಜಿಯವರಿಗೆ ಅಹಿಂಸಾ ಧರ್ಮಪಾಲನೆ ಅವರ ತಾಯಿಯಿಂದ ಬಂದಿತ್ತು. ಗಾಂಧೀಜಿ ಅವರು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ವಿದೇಶಕ್ಕೆ ತೆರಳುವಾಗ ಜೈನ ಮುನಿಗಳಿಂದ ಮಾಂಸಹಾರ, ಮದ್ಯಪಾನ ಮತ್ತು ಕೆಟ್ಟ ಚಟಗಳಿಂದ ದೂರ ಇರುವುದಾಗಿ ಪ್ರತಿಜ್ಞೆ ಮಾಡಿಸಿಕೊಂಡು ಕಳುಹಿಸಿ ಕೊಟ್ಟಿದ್ದರು. ಗಾಂಧೀಜಿ ಈ ಅಂಶಗಳನ್ನು ಜೀವನ ಪೂರ್ತಿ ಅಳವಡಿಸಿಕೊಂಡರು ಎಂದು ಸ್ಮರಿಸಿದರು.

ಹಂಪಿ ಕನ್ನಡ ವಿವಿ ಕುಲಪತಿ ಡಾ| ಸ.ಚಿ.ರಮೇಶ್, ಜೈನ ಸಾಹಿತ್ಯ ಸಂಸ್ಕೃತಿ ಅಧ್ಯಯನ ಕೇಂದ್ರದ ಡಾ| ತಾರಿಹಳ್ಳಿ ಹನುಮಂತಪ್ಪ, ಹಂಪಿ ವಿವಿ ಕಾರ್ಯಕಾರಿ ಸಮಿತಿ ಸದಸ್ಯರಾದ ಸಮೀ ಉಲ್ಲಾ ಖಾನ್, ಡಾ| ಓ.ಓಬಯ್ಯ ಉಪಸ್ಥಿತರಿದ್ದರು.

ಕನ್ನಡಪ್ರಭ

ಮಂಗಳವಾರ 2.8.2022

ಜಾಗೃತಿ | ಮದ್ಯಪಾನ ನಿಷೇಧ ಮಂಡಳಿಯ ಹೆಸರು ಬದಲಾವಣೆ ನೈತಿಕತೆಯ ಪತನ: ಶಿವರುದ್ರ ಸ್ವಾಮೀಜಿ

# 'ಸ್ವಾತಂತ್ರ್ಯ ಸಂಗ್ರಾಮ ದುಶ್ಚಟಗಳ ವಿರುದ್ಧದ ಹೋರಾಟವೂ ಆಗಿತ್ತು'

• ಕನ್ನಡಪ್ರಭ ವಾರ್ತೆ ಬೆಂಗಳೂರು

ಸ್ವಾತಂತ್ರ್ಯ ಹೋರಾಟವು ದುಶ್ಚಟಗಳ ವಿರುದ್ಧದ ಹೋರಾಟವೂ ಆಗಿತ್ತು. ಸ್ವಾತಂತ್ರ್ಯ ನಂತರ ಮದ್ಯಪಾನ ನಿಷೇಧ ಮಂಡಳಿ ಎಂದು ಸ್ಥಾಪನೆ ಆಗಿತ್ತು. ಆದರೆ ಕಾಲಕ್ರಮೇಣ ಮದ್ಯಪಾನ ನಿಷೇಧದ ಬದಲು ಸಂಯಮ ಮಂಡಳಿ ಆಯಿತು. ಈ ಮೂಲಕ ಮದ್ಯಪಾನ ತಪ್ಪು ಎನ್ನುವ ಬದಲು ಅದನ್ನು ಚಟವಾಗಿಸಬಾರದು ಎಂದು ಹೇಳುವ ಮಟ್ಟಕ್ಕೆ ಬಂದೆವು. ಇದು ನೈತಿಕತೆಯ ಪತನದ ಸಂಕೇತ ಎಂದು ಬೇಲಿ ಮಠದ ಶಿವರುದ್ರ ಸ್ವಾಮೀಜಿ ಹೇಳಿದರು.

ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಹಾಗೂ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಸಹಯೋಗದೊಂದಿಗೆ ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಡಾ। ಮಹಾಂತ ಶಿವಯೋಗಿಗಳ 97ನೇ ಜನ್ಮ ದಿನಾಚರಣೆಯ ಸಂಸ್ಮರಣೆಯಲ್ಲಿ ಪ್ರಥಮ ಬಾರಿಗೆ ಆಯೋಜಿಸಿದ್ದ ವ್ಯಸನ ಮುಕ್ತ ದಿನಾಚರಣೆಯ ಸಮಾರಂಭದಲ್ಲಿ ಮಾತನಾಡಿದ ಅವರು, ಮಕ್ಕಳಿಗೆ ಕಾಲೇಜುಗಳಿಂದ ಹೊರಬರುವ ಮೊದಲೇ ದುಶ್ಚಟ ಮತ್ತು ದುರಾಚಾರದ ಬಗ್ಗೆ ಅರಿವು ಮೂಡಿಸಬೇಕು. ಆಗ ಮಾತ್ರ ಮುಂದಿನ ಸಮಾಜವನ್ನು ಅಪಾಯದಿಂದ ಕಾಪಾಡಲು ಸಾಧ್ಯ ಎಂದು ಹೇಳಿದರು.

ಚಿತ್ತರಗಿ ಇಳಕಲ್ ವಿಜಯಮಹಾಂತೇಶ್ವರ ಮಠದ ಡಾ। ತೋಂಟದ ಸಿದ್ಧರಾಮ ಮಹಾಸ್ವಾಮಿಗಳು ಮಾತನಾಡಿ, ಪ್ರತಿ ಚುನಾವಣೆ ಬಂದಾಗಲೂ ಪ್ರತಿ ಹಳ್ಳಿಗಳಲ್ಲಿ 500ರಿಂದ 600 ಹೊಸ ಕುಡುಕರು ಹುಟ್ಟಿಕೊಳ್ಳುತ್ತಿದ್ದಾರೆ. 16-17 ವರ್ಷದ ಹುಡುಗರು ಚುನಾವಣೆಯ ಸಂದರ್ಭದಲ್ಲಿ ಕುಡಿತ ಕಲಿತುಕೊಳ್ಳುತ್ತಿದ್ದಾರೆ ಎಂದು ಖೇದ ವ್ಯಕ್ತಪಡಿಸಿದರು.

ಬಸವಕಲ್ಯಾಣದ ಅನುಭವ ಮಂಟಪ ಅಧ್ಯಕ್ಷ ಡಾ। ಬಸವಲಿಂಗ ಪಟ್ಟದೇವರು, ವಿಧಾನ ಪರಿಷತ್ ಸದಸ್ಯ ಅ.ದೇವೇಗೌಡ, ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿಯ ಅಧ್ಯಕ್ಷ ಮಲ್ಲಿಕಾರ್ಜುನ ಬಸವಣ್ಣಪ್ಪ ತುಬಾಕಿ, ಮಂಡಳಿಯ ಕಾರ್ಯದರ್ಶಿ ಎನ್.ಎಸ್.ಮಹೇಶ್, ನಿಕಟಪೂರ್ವ ಕಾರ್ಯದರ್ಶಿ ಎ.ಹನುಮನರಸಯ್ಯ ಪಾಲ್ಗೊಂಡಿದ್ದರು.



ಗಾಂಧಿ ಭವನದಲ್ಲಿ ಜರುಗಿದ ವ್ಯಸನಮುಕ್ತ ದಿನಾಚರಣೆಯಲ್ಲಿ ಬೇಲಿ ಮಠದ ಶಿವರುದ್ರ ಸ್ವಾಮೀಜಿ, ಚಿತ್ತರಗಿ ಇಳಕಲ್ ವಿಜಯ ಮಹಾಂತೇಶ್ವರ ಮಠದ ಡಾ। ತೋಂಟದ ಸಿದ್ಧರಾಮ ಮಹಾಸ್ವಾಮಿ, ಬಸವ ಕಲ್ಯಾಣದ ಅನುಭವ ಮಂಟಪ ಅಧ್ಯಕ್ಷ ಡಾ। ಬಸವಲಿಂಗ ಪಟ್ಟದ್ದೇವರು, ರಾಜ್ಯ ಮದ್ಯಪಾನ ಸಂಯಮ ಮಂಡಳಿಯ ಅಧ್ಯಕ್ಷ ಮಲ್ಲಿಕಾರ್ಜುನ ಬಸವಣ್ಣಪ್ಪ ತುಬಾಕಿ, ಗಾಂಧಿ ಭವನದ ಅಧ್ಯಕ್ಷ ವೂಡೇ ಪಿ. ಕೃಷ್ಣ ಭಾಗವಹಿಸಿದ್ದರು.

**ರಜೆ ನೀಡಬೇಡಿ:** ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ಗಾಂಧಿ ಭವನದ ಅಧ್ಯಕ್ಷ ವೂಡೇ ಪಿ.ಕೃಷ್ಣ ಮಾತನಾಡಿ, ಮಹಾನ್ ವ್ಯಕ್ತಿಗಳ ದಿನಾಚರಣೆಯಂದು ಅವರ ಸಾಧನೆ ನೆನೆಯಬೇಕು. ಆದ್ದರಿಂದ ಅಂದು ರಜೆ ನೀಡಬಾರದು ಎಂದು ಸರ್ಕಾರಕ್ಕೆ ಮನವಿ ಮಾಡಿದರು.

ಪ್ರಜಾವಾಣಿ ಮಂಗಳವಾರ • ಆಗಸ್ಟ್ 2, 2022



ಮಧ್ಯಪಾನ ಸಂಯಮ ಮಂಡಳಿ ಮಹಾಂತ ಶಿವಯೋಗಿ ಸ್ವಾಮೀಜಿ ಜನ್ಮದಿನ ಪ್ರಯುಕ್ತ ಆಯೋಜಿಸಿದ್ದ ವ್ಯಸನಮುಕ್ತ ದಿನಾಚರಣೆಯಲ್ಲಿ ಇಲಕಲ್ಲ ಗುರುಮಹಾಂತ ಸ್ವಾಮೀಜಿ, ಬೇಲಿ ಮಠದ ಸ್ವಾಮೀಜಿ, ಇಮ್ಮಡಿ ಕರಿಬಸವ ದೇಶಿಕೇಂದ್ರ ಸ್ವಾಮೀಜಿ, ಬಸವಲಿಂಗ ಪಟ್ಟದೇವರು, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಮಂಡಳಿ ಅಧ್ಯಕ್ಷ ಮಲ್ಲಿಕಾರ್ಜುನ ಬಸವಣ್ಣಪ್ಪ ತುಬಾಕಿ ಅವರು ಮಹಾಂತ ಶಿವಯೋಗಿ ಸ್ವಾಮೀಜಿ ಅರವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದರು – ಪ್ರಜಾವಾಣಿ ಚಿತ್ರ

ಈ ಸಂಜೆ

Mon, 01 August 2022



ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಯುಕ್ತಾಶ್ರಯದಲ್ಲಿ ಚಿತ್ತರಗಿ ಇಳಕಲ್‌ನ ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನ ಮಠದ ಡಾ.ಶ್ರೀ ಮಹಾಂತ ಶಿವಯೋಗಿಗಳ ಜನ್ಮದಿನಾಚರಣೆ ಪ್ರಯುಕ್ತ ಗಾಂಧಿಭವನದಲ್ಲಿಂದು ಹಮ್ಮಿಕೊಂಡಿದ್ದ ವ್ಯಸನಮುಕ್ತ ದಿನಾಚರಣೆಯನ್ನು ಡಾ.ಶ್ರೀ ಬಸವಲಿಂಗ ಪಟ್ಟದೇವರು, ಶ್ರೀ ಬಸವಮೂರ್ತಿ ಸ್ವಾಮೀಜಿ, ಶ್ರೀ ಇಮ್ಮಡಿ ಕರಿಬಸವ ದೇಶಿಕೇಂದ್ರ ಸ್ವಾಮೀಜಿ ಉದ್ಘಾಟಿಸಿದರು, ಡಾ.ವೂಡೆ ಪಿ.ಕೃಷ್ಣ, ಮಂಡಳಿ ಅಧ್ಯಕ್ಷ ಮಲ್ಲಿಕಾರ್ಜುನ, ಬಸವಣ್ಣ ಈ ಸಂದರ್ಭದಲ್ಲಿದ್ದರು.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ

VIJAYAVANI » BENGALURU
ಭಾನುವಾರ 31 ಜುಲೈ 2022
31 JULY 2022

# ದಶಕ ಕಳೆದರೂ ಪುಸ್ತಕ ಸಂಸ್ಕೃತಿಗಿಲ್ಲ ಧಕ್ಕೆ

## ಮಲ್ಲೇಪುರಂ ಜಿ. ವೆಂಕಟೇಶ್ ಅಭಿಮತ | ಸಾಧಕರಿಗೆ ಪ್ರಶಸ್ತಿ ಪ್ರದಾನ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಡಿಜಿಟಲ್ ಮಾಧ್ಯಮದ ವೇಗದ ನಡುವೆಯೂ ಪುಸ್ತಕ ತನ್ನ ಅಸ್ತಿತ್ವ ಉಳಿಸಿಕೊಂಡಿದ್ದು, 5 ದಶಕಗಳು ಕಳೆದರೂ ಪುಸ್ತಕ ಸಂಸ್ಕೃತಿಗೆ ಧಕ್ಕೆ ಆಗುವುದಿಲ್ಲ ಎಂದು ಕರ್ನಾಟಕ ಸಂಸ್ಕೃತ ವಿವಿ ವಿಶ್ರಾಂತ ಕುಲಪತಿ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಹೇಳಿದ್ದಾರೆ.

ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘವು ಗಾಂಧಿ ಭವನದಲ್ಲಿ ಶನಿವಾರ ಹಮ್ಮಿಕೊಂಡಿದ್ದ 'ಕೃತಿಗಳ ಲೋಕಾರ್ಪಣೆ ಹಾಗೂ 2021ನೇ ಸಾಲಿನ ಪ್ರಶಸ್ತಿ ಪ್ರದಾನ' ಸಮಾರಂಭ ಉದ್ಘಾಟಿಸಿ ಮಾತನಾಡಿದರು.

ಎಲ್ಲೆಡೆ ಡಿಜಿಟಲ್ ಮಾಧ್ಯಮದ ಬಗ್ಗೆ ಚರ್ಚೆ ನಡೆಯುತ್ತಿದೆ. ಆದರೆ, ಅದು ಎಷ್ಟು ಜನರನ್ನು ತಲುಪುತ್ತಿದೆ ಎಂಬ ಬಗ್ಗೆ ಯೋಚಿಸಬೇಕಿದೆ. ತಾಲೂಕು ಮಟ್ಟ ಸೇರಿ ಬಹಳಷ್ಟು ಕುಗ್ರಾಮಗಳಿಗೆ ಇಂದಿಗೂ ಸೂಕ್ತ ನೆಟ್‌ವರ್ಕ್ ಸಂಪರ್ಕ ಲಭ್ಯವಿಲ್ಲ. ಅಂತಹ ಕಡೆಗಳಲ್ಲಿ ಡಿಜಿಟಲ್ ಮಾಧ್ಯಮ ಹೇಗೆ ಜನರನ್ನು ತಲುಪಲು ಸಾಧ್ಯ ಎಂಬ ಬಗ್ಗೆಯೂ ಆಲೋಚಿಸಬೇಕಿದೆ ಎಂದರು.

ಡಿಜಿಟಲ್ ಮಾಧ್ಯಮದಲ್ಲಿ ಸಾಹಿತ್ಯ ಕೃತಿಗಳು ಲಭ್ಯವಾಗುತ್ತಿವೆಯಾದರೂ ಪುಸ್ತಕಗಳ ಬೇಡಿಕೆ ಕುಗ್ಗಿಲ್ಲ. ಡಿಜಿಟಲ್ ಮಾಧ್ಯಮದ ಮೂಲಕ ಸಾಹಿತ್ಯ ಎಷ್ಟು ಜನರನ್ನು ತಲುಪುತ್ತಿವೆ ಎಂಬ ಬಗ್ಗೆ ಸಮೀಕ್ಷೆ ಆಗಬೇಕಿದೆ. ಅಲ್ಲದೆ ಪುಸ್ತಕಗಳನ್ನು ಕೈಲಿ ಹಿಡಿದು ಓದುವಾಗ ಸಿಗುವ ಸಂತೋಷ ಸಾಫ್ಟ್ ಪುಸ್ತಕಗಳಲ್ಲಿ ಸಿಗುವುದಿಲ್ಲ ಎಂದರು.

**ಪ್ರಕಾಶಕರ ಕಡೆಗಣನೆ:** ನಿಡಸಾಲೆ ಪುಟ್ಟಸ್ವಾಮಯ್ಯ ಮಾತನಾಡಿ, ಮುದ್ರಣ ಕ್ಷೇತ್ರ ದುಬಾರಿಯಾಗಿದೆ. ಒಂದು ಕಡೆ ಪ್ರಿಂಟಿಂಗ್ ಪೇಪರ್ ದರ ಹೆಚ್ಚಿದರೆ, ಮತ್ತೊಂದೆಡೆ ಶೇ. 18 ಜಿಎಸ್‌ಟಿ ಹೊರೆಯಿಂದ ನಷ್ಟ ಎದುರಿಸುತ್ತಿದೆ. ಹೀಗಾಗಿ ಗ್ರಂಥಾಲಯ ಇಲಾಖೆಗೆ ಅಗತ್ಯ ಸೌಲಭ್ಯ ಕಲ್ಪಿಸಬೇಕು ಎಂದರು.

**ಪ್ರಶಸ್ತಿ ಪ್ರದಾನ:** ಡಾ. ಗಜಾನನ ಶರ್ಮರ 'ಚೆನ್ನ ಭೈರಾದೇವಿ' ಕೃತಿಗೆ ಸಾಹಿತ್ಯ ರತ್ನ, ಡಾ. ಶರಣು ಹುಲ್ಲೂರು ಅವರ 'ಅನಂತವಾಗಿರು' ಕೃತಿಗೆ ಯುವ ಸಾಹಿತ್ಯ ರತ್ನ, ಸಾವಣ್ಣ ಪ್ರಕಾಶನದ ಶ್ರೀ ಜಮೀಲ್ ಅವರಿಗೆ ಪುಸ್ತಕ ರತ್ನ ಹಾಗೂ ಡಾ. ವಿಜಯಾ ಅವರಿಗೆ ಮುದ್ರಣ ರತ್ನ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಪ್ರಶಸ್ತಿಯು ತಲಾ ಹತ್ತು ಸಾವಿರ ರೂ. ನಗದು ಒಳಗೊಂಡಿದೆ.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಜೀರಿಗೆ ಲೋಕೇಶ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಪ್ರಜಾವಾಣಿ ಸಂಪಾದಕ ರವೀಂದ್ರ ಭಟ್ ಮತ್ತಿತರರು ಉಪಸ್ಥಿತರಿದ್ದರು.



ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘವು ಗಾಂಧಿ ಭವನದಲ್ಲಿ ಶನಿವಾರ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಡಾ. ಗಜಾನನ ಶರ್ಮ, ಡಾ. ಶರಣು ಹುಲ್ಲೂರು, ಸಾವಣ್ಣ ಪ್ರಕಾಶನದ ಜಮೀಲ್ ಹಾಗೂ ಡಾ. ವಿಜಯಾ ಅವರಿಗೆ ಪ್ರಶಸ್ತಿ ಪ್ರದಾನ ಮಾಡಲಾಯಿತು.

### ಹಲವು ಪುಸ್ತಕಗಳ ಬಿಡುಗಡೆ

ಡಿ.ಕೆ. ಮಂಜುಳಾ ಅವರ 'ಮುಕ್ತಿ', ಕುಂವೀ ಅವರ 'ರಾಯಲಸೀಮಾ ಕಥೆಗಳು', ಬಿ. ಓಬಯ್ಯ ಅವರ 'ಬಯಕೆಯ ಬೆನ್ನೇರಿ', ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರ 'ತೌಲನಿಕ ಸಾಹಿತ್ಯ ಮೀಮಾಂಸೆ', ಕೇಶವ ರೆಡ್ಡಿ ಹಂದ್ರಾಳರ 'ಬೆರಕೆ ಸೊಪ್ಪು' ಹಾಗೂ ಹೃದಯಶಿವ ಅವರ 'ಕ್ಲ್ಯಾಪ್‌ಬೋರ್ಡ್' ಕೃತಿಗಳು ಲೋಕಾರ್ಪಣೆಗೊಂಡವು.

ಪ್ರಜಾವಾಣಿ

ಭಾನುವಾರ • ಜುಲೈ 31, 2022

ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ್ ಪ್ರಶ್ನೆ

# 'ಡಿಜಿಟಲ್ ಮಾಧ್ಯಮದಲ್ಲಿ ಕೃತಿ: ಓದುವವರು ಯಾರು?'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಕನ್ನಡ ಪುಸ್ತಕ ಲೋಕವು ಈಗ ಡಿಜಿಟಲ್ ಮಾಧ್ಯಮದ ರೂಪ ಪಡೆದಿದೆ. ಇ-ಬುಕ್ಸ್‌ನಲ್ಲಿ ಸಾಹಿತ್ಯ ಕೃತಿ ಓದುವವರು ಯಾರು ಎನ್ನುವ ಪ್ರಶ್ನೆ ನಮ್ಮ ಮುಂದಿದೆ' ಎಂದು ಕರ್ನಾಟಕ ಸಂಸ್ಕೃತ ವಿ.ವಿಯ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ್ ಹೇಳಿದರು.

ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಗಾಂಧಿ ಶಾಂತಿ ಪ್ರತಿಷ್ಠಾನದಿಂದ ಶನಿವಾರ ಆಯೋಜಿಸಿದ್ದ ಆರು ಕೃತಿಗಳ ಲೋಕಾರ್ಪಣೆ ಮತ್ತು ವಾರ್ಷಿಕ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಅವರು ಮಾತನಾಡಿದರು.

'ಸರ್ಕಾರ ಡಿಜಿಟಲ್ ಮಾಧ್ಯಮಕ್ಕೆ ಲಕ್ಷಾಂತರ ರೂಪಾಯಿ ವ್ಯಯಿಸುತ್ತಿದೆ. ಆದರೆ, ಮಲೆನಾಡಿನ ಜಿಲ್ಲೆಗಳು ಹಾಗೂ ಉತ್ತರ ಕನ್ನಡ ಜಿಲ್ಲೆಯ ಕುಗ್ರಾಮಗಳಲ್ಲಿ ಇಂಟರ್‌ನೆಟ್ ಸೌಲಭ್ಯವೇ ಇಲ್ಲ. ಓದುಗನಿಗೆ 'ಇ ಬುಕ್' ತಲುಪುವುದಾದರೂ ಹೇಗೆ' ಎಂದು ಪ್ರಶ್ನಿಸಿದರು.



ನಗರದಲ್ಲಿ ಶನಿವಾರ ಆಯೋಜಿಸಿದ್ದ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ (ಕುಳಿತವರು ಎಡದಿಂದ) ಡಾ.ವಿಜಯಾ, ಡಾ.ಗಜಾನನ ಶರ್ಮ, ಶರಣು ಹುಲ್ಲೂರು, ಜಮೀಲ್ ಸಾವಣ್ಣ ಅವರಿಗೆ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸಲಾಯಿತು. (ಎಡದಿಂದ) ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ್, 'ಗಾಂಧಿ ಶಾಂತಿ ಪ್ರತಿಷ್ಠಾನ'ದ ಅಧ್ಯಕ್ಷ ಜೇರಿಗೆ ಲೋಕೇಶ್, ಕರ್ನಾಟಕ ಕನ್ನಡ ಬರಹಗಾರ ಮತ್ತು ಪ್ರಕಾಶಕರ ಸಂಘದ ಅಧ್ಯಕ್ಷ ನಿಡಸಾಲೆ ಪುಟ್ಟಸ್ವಾಮಯ್ಯ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಆರ್. ದೊಡ್ಡೇಗೌಡ ಮತ್ತು ಕಾರ್ಯಕಾರಿ ಸಮಿತಿ ಸದಸ್ಯೆ ಮಾಲತಿ ಶೆಟ್ಟಿ ಇದ್ದರು

ಪ್ರಜಾವಾಣಿ ಚಿತ್ರ

ಪ್ರಶಸ್ತಿ ಪುರಸ್ಕೃತೆ ಡಾ.ವಿಜಯಾ ಅವರು, ಮುದ್ರಣ ಕ್ಷೇತ್ರ ಸಂಕಷ್ಟದಲ್ಲಿರುವುದರ ಕುರಿತು ಗಮನಸೆಳೆದರು. ಸಂಘದ ಅಧ್ಯಕ್ಷ ನಿಡಸಾಲೆ ಪುಟ್ಟಸ್ವಾಮಿ ಅವರೂ ಇದನ್ನು ಸಮರ್ಥಿಸಿದರು.

'ಪ್ರಜಾವಾಣಿ' ಕಾರ್ಯನಿರ್ವಾಹಕ ಸಂಪಾದಕ ರವೀಂದ್ರ ಭಟ್ಟ ಅವರು ಕೃತಿ ಬಿಡುಗಡೆಗೊಳಿಸಿ ಮಾತನಾಡಿದರು. ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಜೇರಿಗೆ ಲೋಕೇಶ್, ಸಂಘದ ಕಾರ್ಯದರ್ಶಿ ಆರ್.ದೊಡ್ಡೇಗೌಡ ಹಾಜರಿದ್ದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ. ಕೃಷ್ಣ ಮಾತನಾಡಿದರು.

## ಪ್ರಶಸ್ತಿ ಪುರಸ್ಕೃತರು

ಇದೇ ವೇಳೆ ವಿವಿಧ ಸಾಧಕರಿಗೆ 2021ನೇ ಸಾಲಿನ ವಾರ್ಷಿಕ ಪ್ರಶಸ್ತಿ ಪ್ರದಾನ ಮಾಡಲಾಯಿತು.

ಡಾ.ಗಜಾನನ ಶರ್ಮ ಅವರ 'ಚೆನ್ನಭೈರಾದೇವಿ' ಕೃತಿಗೆ 'ಸಾಹಿತ್ಯ ರತ್ನ' ಪ್ರಶಸ್ತಿ, ಡಾ.ಶರಣು ಹುಲ್ಲೂರು ಅವರ 'ಅನಂತವಾಗಿರು' ಕೃತಿಗೆ 'ಯುವ ಸಾಹಿತ್ಯ ರತ್ನ', ಜಮೀಲ್ ಸಾವಣ್ಣಗೆ (ಸಾವಣ್ಣ ಪ್ರಕಾಶನ) 'ಪುಸ್ತಕ ರತ್ನ' ಹಾಗೂ ಡಾ.ವಿಜಯಾ ಅವರಿಗೆ (ಇಳಾ ಮುದ್ರಣಾಲಯ) 'ಮುದ್ರಣ ರತ್ನ' ಪ್ರಶಸ್ತಿ ಪ್ರದಾನ ಮಾಡಲಾಯಿತು.

## ಆರು ಕೃತಿಗಳ ಬಿಡುಗಡೆ

- ಡಿ.ಕೆ.ಮಂಜುಳಾ – ಮುಕ್ತ
- ಕುಂ.ವೀರಭದ್ರಪ್ಪ – ರಾಯಲ ಸೀಮಾ ಕಥೆಗಳು
- ಓಬಯ್ಯ ಬಿ. – ನಿರಂತರ
- ಮಲ್ಲೇಪುರಂ ಜಿ. ವೆಂಕಟೇಶ್ – ತೌಲನಿಕ ಸಾಹಿತ್ಯ ಮೀಮಾಂಸೆ
- ಕೇಶವರೆಡ್ಡಿ ಹಂದ್ರಾಳ – ಬೆರಕೆ ಸೊಪ್ಪು
- ಹೃದಯ ಶಿವ – ಕ್ಲಾಪ್ ಬೋರ್ಡ್

ಕನ್ನಡಪ್ರಭ

ಭಾನುವಾರ 31.7.2022

# ಸರ್ಕಾರವೇ 500 ಪುಸ್ತಕ ಖರೀದಿಸಲಿ: ಮಲ್ಲೇಪುರಂ

## ₹15 ಕೋಟಿ ಮೀಸಲಿಟ್ಟು ಪ್ರತಿ ವರ್ಷ ಪುಸ್ತಕ ಕೊಳ್ಳಲಿ | ಕನ್ನಡ ಪುಸ್ತಕ ಪ್ರಾಧಿಕಾರದಿಂದ ಉದಯೋನ್ಮುಖ ಲೇಖಕರು ಬೆಳಕಿಗೆ

• ಕನ್ನಡಪ್ರಭ ವಾರ್ತೆ ಬೆಂಗಳೂರು

ಪ್ರತಿ ವರ್ಷ ₹15 ಕೋಟಿ ಅನುದಾನ-ಮೀಸಲಿಡುವ ಜೊತೆಗೆ 500 ಪುಸ್ತಕಗಳನ್ನು ಸರ್ಕಾರವೇ ಖರೀದಿಸಬೇಕು ಎಂದು ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಆಗ್ರಹಿಸಿದರು.

ಶನಿವಾರ ಗಾಂಧೀ ಸ್ಮಾರಕ ನಿಧಿ ಭವನದಲ್ಲಿ ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಗಾಂಧಿ ಶಾಂತಿ ಪ್ರತಿಷ್ಠಾನ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಸಹಯೋಗದಲ್ಲಿ ನಡೆದ ಕೃತಿಗಳ ಲೋಕಾರ್ಪಣೆ ಹಾಗೂ ಪ್ರಶಸ್ತಿ ಪ್ರದಾನ ಸಮಾರಂಭ ಉದ್ಘಾಟಿಸಿ ಅವರು ಮಾತನಾಡಿದರು.

ಕನ್ನಡ ಪುಸ್ತಕ ಪ್ರಾಧಿಕಾರ ಅಸ್ತಿತ್ವಕ್ಕೆ ಬಂದ ನಂತರವೇ ಉದಯೋನ್ಮುಖ ಲೇಖಕರು ಬೆಳಕಿಗೆ ಬರುವಂತಾಯಿತು. ಅನೇಕ ಲೇಖಕರು ಬರೆದ ಮಹತ್ವದ ಕೃತಿಗಳು, ಗ್ರಂಥಗಳನ್ನು ಖರೀದಿ ಮಾಡಲು ಪ್ರಾಧಿಕಾರಗಳು, ಅಕಾಡೆಮಿಗಳು ಮತ್ತು ಗ್ರಂಥಾಲಯಗಳಲ್ಲಿ ಅನುದಾನವೇ ಇಲ್ಲದಂತಾಗಿದೆ. ರಾಜ್ಯ ಸರ್ಕಾರ ಪುಸ್ತಕಗಳ ಖರೀದಿಗೆ ಅಗತ್ಯ ಅನುದಾನ ನೀಡುವ ಮೂಲಕ ಯುವ ಬರಹಗಾರರು, ಪ್ರಕಾಶಕರಿಗೆ ಪ್ರೋತ್ಸಾಹ ನೀಡಬೇಕು ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘದ ಅಧ್ಯಕ್ಷ ನಿಡಸಾಲೆ ಪುಟ್ಟಸ್ವಾಮಯ್ಯ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಜೇರಿಗೆ ಲೋಕೇಶ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಕಾರ್ಯದರ್ಶಿ ಆರ್. ದೊಡ್ಡೇಗೌಡ ಮೊದಲಾದವರಿದ್ದರು.



ನಗರದ ಗಾಂಧೀ ಸ್ಮಾರಕ ನಿಧಿ ಭವನದಲ್ಲಿ ನಡೆದ ಕಾರ್ಯಕ್ರಮದಲ್ಲಿ ವಿಜೇತ ಕೃತಿಗಳ ಲೇಖಕರಿಗೆ ವಿವಿಧ ಪ್ರಶಸ್ತಿಗಳನ್ನು ಪ್ರೊ.ಮಲ್ಲೇಪುರ ಜಿ.ವೆಂಕಟೇಶ್ ಪ್ರದಾನ ಮಾಡಿದರು.

### ಕೃತಿಗಳ ಲೋಕಾರ್ಪಣೆ

ಲೇಖಕಿ ಡಿ.ಕೆ.ಮಂಜುಳಾ ಅವರ 'ಮುಕ್ತೆ', ಕುಂ.ವೀರಭದ್ರಪ್ಪ ಅವರ ಅವರ 'ರಾಯಲ ಸೀಮಾ ಕಥೆಗಳು', ಬಿ.ಓಬಯ್ಯ ಅವರ 'ಬಯಕೆಯ ಬೆನ್ನೇರಿ', ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರ 'ತೌಲನಿಕ ಸಾಹಿತ್ಯ ಮೀಮಾಂಸೆ', ಕೇಶವ ರೆಡ್ಡಿ ಹಂದ್ರಾಳರ 'ಬರೆ ಸೊಪ್ಪು' ಹಾಗೂ ಹೃದಯಶಿವ ಅವರ 'ಕ್ಲ್ಯಾಪ್ ಬೋರ್ಡ್' ಕೃತಿಗಳನ್ನು ಪತ್ರಕರ್ತ ರವೀಂದ್ರ ಭಟ್ ಲೋಕಾರ್ಪಣೆಗೊಳಿಸಿದರು.

### ಪ್ರಶಸ್ತಿ ಪ್ರದಾನ

ಡಾ| ಗಜಾನನ ಶರ್ಮಾ ಅವರ 'ಚೆನ್ನ ಭೈರಾದೇವಿ' ಕೃತಿಗೆ 'ಸಾಹಿತ್ಯ ರತ್ನ-2021', ಡಾ| ಶರಣು ಹುಲ್ಲೂರು ಅವರ 'ಅನಂತವಾಗಿರು' ಕೃತಿಗೆ 'ಯುವ ಸಾಹಿತ್ಯ ರತ್ನ-2021' ಹಾಗೂ ಡಾ| ವಿಜಯಾ ಅವರಿಗೆ 'ಮುದ್ರಣ ರತ್ನ-2021' ಪ್ರಶಸ್ತಿಗಳನ್ನು ಪ್ರದಾನ ಮಾಡಲಾಯಿತು. ಪ್ರಶಸ್ತಿಯು ತಲಾ ₹10 ಸಾವಿರ ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿದೆ.

ಉದಯವಾಣಿ

ಭಾನುವಾರ, ಜುಲೈ 31, 2022

# ಪುಸ್ತಕೋದ್ಯಮದ ಸಂಕಷ್ಟ ಪರಿಹರಿಸಬೇಕಿದೆ



ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘ ಶನಿವಾರ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ವಿವಿಧ ಕ್ಷೇತ್ರಗಳ ಸಾಧಕರಿಗೆ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಹಿರಿಯ ವಿದ್ವಾಂಸ ಮಲ್ಲೇಪುರಂ ಜಿ. ವೆಂಕಟೇಶ್ ಮತ್ತಿತರರಿದ್ದರು.

ಬೆಂಗಳೂರು: ಕನ್ನಡ ಪುಸ್ತಕೋದ್ಯಮ ಹಲವು ರೀತಿಯ ಸಂಕಷ್ಟಗಳನ್ನು ಎದುರಿಸುತ್ತಿದ್ದು ಸರ್ಕಾರ ಸೇರಿದಂತೆ ನಾವೆಲ್ಲರೂ ಪುಸ್ತಕೋದ್ಯಮದ ಸಂಕಷ್ಟಗಳ ಪರಿಹಾರದತ್ತ ಆಲೋಚಿಸಬೇಕಾಗಿದೆ ಎಂದು ಹಿರಿಯ ವಿದ್ವಾಂಸ ಮಲ್ಲೇಪುರಂ ಜಿ.ವೆಂಕಟೇಶ್ ಸಲಹೆ ನೀಡಿದರು.

ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘ ಶನಿವಾರ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ ಪ್ರಶಸ್ತಿ ಪ್ರದಾನ ಮತ್ತು ಕಾದಂಬರಿಕಾರ ಕುಂ.ವೀರಭದ್ರಪ್ಪ ಅವರ 'ರಾಯಲ ಸೀಮಾ ಕಥೆಗಳು' ಸೇರಿದಂತೆ 6 ಕೃತಿಗಳ ಬಿಡುಗಡೆ ಕಾರ್ಯಕ್ರಮದಲ್ಲಿ ಮಾತನಾಡಿದರು.

ಡಿಜಿಟಲ್ ಮಾಧ್ಯಮ ವಿವಿಧೆಡೆಗಳಲ್ಲಿರುವ ಎಲ್ಲ ಓದುಗರನ್ನು ತಲುಪಲು ಆಗುವುದಿಲ್ಲ, 4 ಜಿ ನೆಟ್‌ವರ್ಕ್ ಹಲವು ಹಳ್ಳಿಗಳಲ್ಲಿ ಕಾರ್ಯನಿರ್ವಹಿಸುವುದಿಲ್ಲ, ಸರ್ಕಾರ ಇದನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ ಎಂದರು.

ಸುಮಾರು 45 ವರ್ಷಗಳ ಹಿಂದೆ ಲೇಖಕರಿಗೆ ಪ್ರಕಾಶಕರೆ ಸಿಗುತ್ತಿರಲಿಲ್ಲ, ಕೆಲವೆ ಕೆಲವು ಲೇಖಕರಿಗೆ ಪ್ರಕಾಶಕರಿರುತ್ತಿದ್ದರು. ಆ ಹಿನ್ನೆಲೆಯಲ್ಲಿ ಕುವೆಂಪು ಅವರು ತಮ್ಮದೇ ಆದ ಪ್ರಕಾಶನದಲ್ಲಿ ಪುಸ್ತಕ ಹೊರತರುತ್ತಿದ್ದರು. ಪೂರ್ಣ ಚಂದ್ರ ತೇಜಸ್ವಿ ಅವರು ಕೂಡ ಗೆಳೆಯರ ಬಳ

## ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಮಲ್ಲೇಪುರಂ ವೆಂಕಟೇಶ್ ಸಲಹೆ

ಗದ ಜತೆ ಸೇರಿ ಪುಸ್ತಕ ಹೊರತರುತ್ತಿದ್ದರು ಎಂದು ಸ್ಮರಿಸಿದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ. ಕೃಷ್ಣ ಮಾತನಾಡಿ, ಗಾಂಧೀಜಿ ಕೂಡ ಪ್ರಕಾಶ ಕರು ಹಾಗೂ ಪತ್ರಕರ್ತರಾಗಿ ಕಾರ್ಯನಿರ್ವಹಿಸಿದ್ದರು. ನನ್ನ ಪ್ರಕಾಶನದಲ್ಲಿ ಹಿಂಸೆ ಪದಗಳು ಇರಬಾರದು. ಸತ್ಯದ ಸಂದೇಶ ಇರಬೇಕು ಅಸತ್ಯ ಇರ ಕೂಡದು ಎನ್ನುತ್ತಿದ್ದರು ಎಂದು ಹೇಳಿದರು.

**ಪ್ರಶಸ್ತಿ ಪ್ರದಾನ:** ಕಾರ್ಯಕ್ರಮದಲ್ಲಿ ಕಾದಂಬರಿಕಾರ ಡಾ. ಗಜಾನನ ಶರ್ಮ ಅವರಿಗೆ ಸಾಹಿತ್ಯ ರತ್ನ, ಡಾ. ಶರಣು ಹುಲ್ಲೂರು ಅವರಿಗೆ ಯುವ ಸಾಹಿತ್ಯ ರತ್ನ, ಜಮೀಲ್ ಸಾವಣ್ಣ ಅವರಿಗೆ ಪುಸ್ತಕ ರತ್ನ, ಇಳಾ ಮುದ್ರಣಾಲಯದ ಡಾ.ವಿಜಯಾ ಅವರಿಗೆ ಮುದ್ರಣ ರತ್ನ ಪ್ರಶಸ್ತಿ ಪ್ರದಾನ ಮಾಡಲಾಯಿತು. ಈ ವೇಳೆ ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘದ ಅಧ್ಯಕ್ಷ ನಿಡಶಾಲೆ ಪುಟ್ಟಸ್ವಾಮಯ್ಯ, ಕಾರ್ಯದರ್ಶಿ ಆರ್.ದೊಡ್ಡೆಗೌಡ, ಹಿರಿಯ ಪತ್ರಕರ್ತ ರವೀಂದ್ರ ಭಟ್ ಇತರರಿದ್ದರು.

ಸಂಯುಕ್ತ ಕರ್ನಾಟಕ

31 ಜುಲೈ 2022 ಭಾನುವಾರ
ಬೆಂಗಳೂರು (BENGALURU)

# ಕ್ಷೀಣಿಸಿದ ಓದಿನ ಅಭಿರುಚಿ ಕಳವಳ

ಬೆಂಗಳೂರು : ಇತ್ತೀಚಿನ ವರ್ಷಗಳಲ್ಲಿ ಓದುವ ಅಭಿರುಚಿ ಕಡಿಮೆಯಾಗುತ್ತಿದ್ದು ಕನ್ನಡ ಪುಸ್ತಕಗಳನ್ನು ಕೊಂಡುಕೊಳ್ಳುವವರೇ ವಿರಳವೆಂಬಂತಾಗಿದೆ ಎಂದು ಕರ್ನಾಟಕ ಸಂಸ್ಕೃತ ವಿವಿ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಕಳವಳ ವ್ಯಕ್ತಪಡಿಸಿದರು.

ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯಗಳ ಸಂಯುಕ್ತಾಶ್ರಯದಲ್ಲಿ ಗಾಂಧಿ ಭವನದಲ್ಲಿ ಏರ್ಪಡಿಸಲಾಗಿದ್ದ ಕೃತಿಗಳ ಲೋಕಾರ್ಪಣೆ ಮತ್ತು ಪ್ರಶಸ್ತಿ ಪ್ರದಾನ ಸಮಾರಂಭ ಉದ್ಘಾಟಿಸಿ ಮಾತನಾಡಿದ ಅವರು, ಇಂತಹ ಸನ್ನಿವೇಶದಲ್ಲಿ ಪುಸ್ತಕಗಳನ್ನು ಪ್ರಕಟಿಸುವುದು ಎಂದರೆ ಪ್ರಕಾಶನ ಸಂಸ್ಥೆಗಳಿಗೆ ಸವಾಲಾಗಿ ಪರಿಣಮಿಸಿದೆ ಎಂದರು. ಇತ್ತೀಚೆಗಂತೂ ಜಿಎಸ್‌ಟಿ ಸೇರಿದಂತೆ ಮುದ್ರಣ ಕಾಗದದ ಬೆಲೆಯೂ ತುಟ್ಟಿಯಾಗಿದೆ. ಪರಿಣಾಮ ಪುಸ್ತಕ ಪ್ರಕಾಶಕರಿಗೆ ಹೊಡೆತ ನೀಡಿದೆ. ಸರ್ಕಾರ ಈ ನಿಟ್ಟಿನಲ್ಲಿ ಯೋಚಿಸಿ ಕೂಡಲೇ ಮುದ್ರಕರಿಗೆ ಉಂಟಾಗುತ್ತಿರುವ ಹೊರೆ ತಗ್ಗಿಸುವ ಯತ್ನ ಮಾಡಬೇಕೆಂದು ಮನವಿ ಮಾಡಿಕೊಂಡರು.

ಪತ್ರಕರ್ತ ರವೀಂದ್ರ ಭಟ್ ಕೃತಿಗಳ ಬಿಡುಗಡೆ ಮಾಡಿದರು. ನಿಡಸಾಲೆ ಪುಟ್ಟಸ್ವಾಮಯ್ಯ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ.ಕೃಷ್ಣ, ಸಪ್ನಾ ಬುಕ್‌ಹೌಸ್‌ನ ಆರ್.ದೊಡ್ಡೇಗೌಡ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಜೇರಿಗೆ ಲೋಕೇಶ್ ಮತ್ತಿತರರಿದ್ದರು.



ಲೇಖಕಿ ಡಿ.ಕೆ.ಮಂಜುಳಾ ಅವರ 'ಮುಕ್ತಿ', ಲೇಖಕರಾದ ಕುಂವೀ ಅವರ 'ರಾಯಲ ಸೀಮೆ ಕಥೆಗಳು', ಓಬಯ್ಯ ಬಿ ಅವರ 'ಬಯಕೆಯ ಬೆನ್ನೇರಿ', ಮಲ್ಲೇಪುರಂ ಜಿ.ವೆಂಕಟೇಶ್ ಅವರ 'ತೌಲನಿಕ ಸಾಹಿತ್ಯ ಮೀಮಾಂಸೆ', ಕೇಶವರೆಡ್ಡಿ ಹಂದ್ರಾಳ ಅವರ 'ಬೇರಿಕೆ ಸೊಪ್ಪು', ಹೃದಯಶಿವ ಅವರ 'ಕ್ಲಾಪ್ ಬೋರ್ಡ್' ಸೇರಿದಂತೆ ಒಟ್ಟು ಆರು ಕೃತಿಗಳನ್ನು ಬಿಡುಗಡೆಗೊಳಿಸಲಾಯಿತು.

ಸಾಹಿತ್ಯ ಮತ್ತು ಪ್ರಕಾಶನ ರಂಗದಲ್ಲಿ ಕೊಡುಗೆ ನೀಡಿದ ಕನ್ನಡದ ನಾಲ್ವರು ಗಣ್ಯರಿಗೆ 2021ನೇ ಸಾಲಿನ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಸಾಹಿತ್ಯದಲ್ಲಿ ಡಾ.ಗಜಾನನ ಶರ್ಮಾಗೆ 2021ನೇ ಸಾಲಿನ ಸಾಹಿತ್ಯ ರತ್ನ ಪ್ರಶಸ್ತಿ, ಡಾ.ಶರಣು ಹುಲ್ಲೂರುಗೆ ಯುವ ಸಾಹಿತ್ಯ ರತ್ನ ಪ್ರಶಸ್ತಿ ನೀಡಿದರೆ, ಸಾವಣ್ಣ ಪ್ರಕಾಶನ ಸಂಸ್ಥೆಯ ಜಮೀಲ್ ಸಾವಣ್ಣ ಅವರಿಗೆ ಪುಸ್ತಕ ರತ್ನ, ಇಳಾ ಮುದ್ರಣಾಲಯದ ಡಾ.ವಿಜಯಾ ಅವರಿಗೆ ಮುದ್ರಣ ರತ್ನ ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು.

ವಿಜಯ ಕರ್ನಾಟಕ ಭಾನುವಾರ,31 ಜುಲೈ 2022

## ಕೃತಿ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಮಲ್ಲೇಪುರಂ ಜಿ. ವೆಂಕಟೇಶ್ ಅಭಿಮತ

# ಪ್ರತಿಭಾವಂತರ ಕೃತಿ ಪ್ರಕಟಣೆಗೆ ಅನುದಾನ ಅಗತ್ಯ

▪ ವಿಕ ಸುದ್ದಿಲೋಕ ಬೆಂಗಳೂರು

ನಾಡಿನ ಹಲವು ಉದಯೋನ್ಮುಖ ಲೇಖಕರನ್ನು ಬೆಳಕಿಗೆ ತರುವಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರವು ಪ್ರಮುಖ ಪಾತ್ರ ವಹಿಸಿದೆ ಎಂದು ಕರ್ನಾಟಕ ಸಂಸ್ಕೃತ ವಿವಿ ನಿವೃತ್ತ ಕುಲಪತಿ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್ ಹೇಳಿದರು.

ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಗಾಂಧಿ ಶಾಂತಿ ಪ್ರತಿಷ್ಠಾನ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯಗಳ ಸಹಯೋಗದೊಂದಿಗೆ ನಗರದ ಗಾಂಧಿ ಭವನದಲ್ಲಿ ಶನಿವಾರ ಹಮ್ಮಿಕೊಂಡಿದ್ದ ನಾನಾ ಕೃತಿಗಳ ಲೋಕಾರ್ಪಣೆ ಹಾಗೂ ನಾನಾ ಸಾಧಕರಿಗೆ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಅವರು ಮಾತನಾಡಿದರು.

''ಪ್ರತಿಭಾವಂತ ಬರಹಗಾರರ ಕೃತಿಗಳನ್ನು ಪ್ರಕಟಿಸಲು ಸರಕಾರ ಅನುದಾನ ನೀಡಬೇಕು. ಪ್ರತಿ ವರ್ಷ 15 ಕೋಟಿ ರೂ.ಗಳ ಅನುದಾನ ಮೀಸಲಿಡುವ ಜತೆಗೆ 500 ಪುಸ್ತಕಗಳನ್ನು ಸರಕಾರದಿಂದಲೇ ಖರೀದಿಸುವಂತೆ ಒತ್ತಾಯಿಸಬೇಕು,'' ಎಂದು ಕರೆ ನೀಡಿದರು.

ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘದ ಅಧ್ಯಕ್ಷ ನಿಡಸಾಲೆ ಪುಟ್ಟಸ್ವಾಮಯ್ಯ ಮಾತನಾಡಿ, ''ಸರಕಾರ ಪ್ರಕಾಶಕರನ್ನು ಹೀನಾಯವಾಗಿ ನಡೆಸಿಕೊಳ್ಳುತ್ತಿದೆ. ನಮ್ಮ ಬೇಡಿಕೆಗಳಿಗೆ ಸ್ಪಂದಿಸುತ್ತಿಲ್ಲ. ಪ್ರತಿ ವರ್ಷ 15 ಕೋಟಿ ರೂ. ಅನುದಾನ ನೀಡುವುದಾಗಿ ಘೋಷಿಸಿದ್ದರೂ, ಇನ್ನೂ 10 ಕೋಟಿ ರೂ. ಬಾಕಿ ಉಳಿಸಿಕೊಂಡಿದೆ. ಇದರಿಂದ ಪ್ರಕಟಣೆಗೆ ಸಜ್ಜಾಗಿರುವ ಎಷ್ಟೋ ಪುಸ್ತಕಗಳು ಮೂಲೆ ಸೇರುತ್ತಿವೆ. ಕಾಗದದ ಬೆಲೆ ಹೆಚ್ಚಾಗುತ್ತಿದ್ದು ಮುಂದಿನ ದಿನಗಳಲ್ಲಿ ಪುಸ್ತಕ ಪ್ರಕಟಣೆಯೂ ಕಷ್ಟವಾಗಲಿದೆ. ಜತೆಗೆ ಶೇ 18ರಷ್ಟು ಜಿಎಸ್‌ಟಿ ಹೊರೆ ಹೇರಲಾಗಿದೆ. ಹೀಗಾದರೆ ನಾವು ಸುಧಾರಿಸಿಕೊಳ್ಳುವುದಾದರೂ ಹೇಗೆ? ಹೀಗಾಗಿ, ಸರಕಾರ ಗ್ರಂಥಾಲಯ ಇಲಾಖೆಯನ್ನು ಒಂದು ಇಲಾಖೆ ಎಂದು ಪರಿಗಣಿಸಿ ಅನುದಾನ ನೀಡುವುದು ಸೇರಿದಂತೆ ಅಗತ್ಯ ಸೌಲಭ್ಯಗಳನ್ನು ಕಲ್ಪಿಸಬೇಕು,'' ಎಂದು ಒತ್ತಾಯಿಸಿದರು.

ಇದೇ ವೇಳೆ ಡಾ. ಗಜಾನನ ಶರ್ಮಾ ಅವರ 'ಚೆನ್ನಭೈರಾದೇವಿ' ಕೃತಿಗೆ 'ಸಾಹಿತ್ಯ ರತ್ನ-2021', ಡಾ. ಶರಣು ಹುಲ್ಲೂರು ಅವರ 'ಅನಂತವಾಗಿರು' ಕೃತಿಗೆ 'ಯುವ ಸಾಹಿತ್ಯ ರತ್ನ-2021' , ಡಾ. ವಿಜಯಾ ಅವರಿಗೆ 'ಮುದ್ರಣ ರತ್ನ-2021' ಹಾಗೂ ಸಾವಣ್ಣ ಪ್ರಕಾಶನದ ಜಮೀಲ್ ಸಾವಣ್ಣ ಅವರಿಗೆ 'ಪುಸ್ತಕ ರತ್ನ- 2021' ಪ್ರಶಸ್ತಿಗಳನ್ನು ಪ್ರದಾನ ಮಾಡಲಾಯಿತು.



ಗಾಂಧಿ ಭವನದಲ್ಲಿ ಶನಿವಾರ ಹಮ್ಮಿಕೊಂಡಿದ್ದ ಸಮಾರಂಭದಲ್ಲಿ ಡಾ. ಗಜಾನನ ಶರ್ಮಾ, ಶರಣು ಹುಲ್ಲೂರು, ಡಾ. ವಿಜಯಾ, ಜಮೀಲ್ ಸಾವಣ್ಣ ಅವರಿಗೆ ಪ್ರಶಸ್ತಿ ಪ್ರದಾನ ಮಾಡಲಾಯಿತು.

ವಿಜಯ ಕರ್ನಾಟಕ

ಶನಿವಾರ, 30 ಜುಲೈ 2022, ಬೆಂಗಳೂರು

### ಉದಯಭಾನು ಕಲಾಸಂಘದ ಸುವರ್ಣ ಮಹೋತ್ಸವ ಸ್ಮಾರಕ ಉದ್ಘಾಟನೆ

# ಮಾತೃಭಾಷೆಗೆ ಎದುರಾಗಿವೆ ಸಂಕೀರ್ಣ ಸವಾಲುಗಳು

■ ವಿಕ ಸುದ್ದಿಲೋಕ ಬೆಂಗಳೂರು

ಮಾಹಿತಿ ತಂತ್ರಜ್ಞಾನದ ಫಲವಾಗಿ ಬದಲಾದ ಕಾಲಘಟ್ಟದಲ್ಲಿ ಮಾತೃಭಾಷೆಯೂ ಸಂಕೀರ್ಣ ಸವಾಲುಗಳನ್ನು ಎದುರಿಸುತ್ತಿದೆ ಎಂದು ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆಯ ಮಾಜಿ ಅಧ್ಯಕ್ಷ ಡಾ. ಎ.ಎಸ್. ಕಿರಣ್‌ಕುಮಾರ್ ಹೇಳಿದರು.

ಕೆಂಪೇಗೌಡ ಬಡಾವಣೆಯಲ್ಲಿ ಉದಯಭಾನು ಕಲಾಸಂಘವು ಹಮ್ಮಿಕೊಂಡಿದ್ದ ಸುವರ್ಣ ಮಹೋತ್ಸವದ ಸ್ಮಾರಕ ಉದ್ಘಾಟನೆ ಹಾಗೂ 'ಕರ್ನಾಟಕ ವಿಜ್ಞಾನ ತಂತ್ರಜ್ಞಾನ ದರ್ಶನ'ದ ಎರಡು ಸಂಪುಟಗಳನ್ನು ಬಿಡುಗಡೆ ಮಾಡಿ ಅವರು ಮಾತನಾಡಿದರು.

''ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಮಾತೃಭಾಷೆಯ ಕಲಿಕೆಗೆ ಆದ್ಯತೆ ನೀಡಲಾಗುತ್ತಿದೆ. ಆದರೆ ಇಂಗ್ಲಿಷ್ ಶಿಕ್ಷಣದ ಮಹತ್ವದಿಂದಾಗಿ ನಮ್ಮಲ್ಲಿನ ದೃಷ್ಟಿಕೋನಗಳು ವಸಾಹತೀಕರಣಗೊಳ್ಳುತ್ತಿವೆ. ತಕ್ಷಣಕ್ಕೆ ಕೈಗೆಟಕುವ ಅನುವಾದದ ಅವಕಾಶಗಳು ಒಂದು ಭಾಷೆಯ ಅವಲಂಬನೆಯನ್ನು ಕಡಿಮೆ ಮಾಡಿವೆ,'' ಎಂದರು.

ನಿವೃತ್ತ ಐಎಎಸ್ ಅಧಿಕಾರಿ ಚಿರಂಜೀವಿ ಸಿಂಘ್ ಮಾತನಾಡಿ, ''ಕನ್ನಡ ಭಾಷೆಯ ಪದಗಳನ್ನೇ ಕೃತಿಗಳಲ್ಲಿ ಬಳಸಬೇಕು ಎಂಬ ಧೋರಣೆ ಭಾಷೆಗೆ ಹಿಂಸೆ ಮಾಡುತ್ತದೆ. ಹೊರಗಿನಿಂದ ಬರುವ ಹೊಸ ಪದಗಳನ್ನು ಸ್ವೀಕರಿಸಿ, ಅವುಗಳನ್ನೇ ಕನ್ನಡಕ್ಕೆ ಒಗ್ಗಿಸಿಕೊಂಡರೆ ಭಾಷೆಯೂ ಸಮೃದ್ಧವಾಗುತ್ತದೆ. ಕಲಿಕೆಯೂ ಸರಳವಾಗುತ್ತದೆ,'' ಎಂದು ಕಿವಿಮಾತು ಹೇಳಿದ್ದರು.



ಕೆಂಪೇಗೌಡ ಬಡಾವಣೆಯಲ್ಲಿ ಉದಯಭಾನು ಕಲಾಸಂಘವು ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ 'ಕರ್ನಾಟಕ ವಿಜ್ಞಾನ ತಂತ್ರಜ್ಞಾನ ದರ್ಶನದ ಎರಡು ಸಂಪುಟಗಳನ್ನು ಬಿಡುಗಡೆ ಮಾಡಲಾಯಿತು. ಈ ವೇಳೆ ಡಾ. ಎ.ಎಸ್. ಕಿರಣ್‌ಕುಮಾರ್, ಚಿರಂಜೀವಿ ಸಿಂಘ್ ಮತ್ತಿತರರು ಉಪಸ್ಥಿತರಿದ್ದರು.

50 ವರ್ಷಗಳ ಅವಧಿಯಲ್ಲಿ ಸಂಘ ನಡೆದು ಬಂದ ದಾರಿ, ಕೈಗೊಂಡ ಸೇವಾ ಕಾರ್ಯಗಳ ಸಾಕ್ಷ್ಯಚಿತ್ರ ಪ್ರದರ್ಶಿಸಲಾಯಿತು. ಕೃತಿಯ ಪ್ರಧಾನ ಸಂಪಾದಕರಾದ ಡಾ. ಎಂ.ಎಸ್. ಸುರೇಶ್, ಸಂಘದ ಅಧ್ಯಕ್ಷ ಶ್ರೀರಾಮೇಗೌಡ, ಸಂಸ್ಥಾಪಕ ಗೌರವ ಕಾರ್ಯದರ್ಶಿ ಎಂ. ನರಸಿಂಹ, ನಿವೃತ್ತ ನ್ಯಾಯಮೂರ್ತಿ ಎ.ಜೆ. ಸದಾಶಿವ, ಮಾಜಿ ಸಚಿವೆ ಲೀಲಾದೇವಿ ಆರ್. ಪ್ರಸಾದ್, ಶಾಸಕ ಎಲ್.ಎ. ರವಿಸುಬ್ರಹ್ಮಣ್ಯ, ನಿವೃತ್ತ ನ್ಯಾಯಮೂರ್ತಿ ಎನ್. ಕುಮಾರ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ವಿಜಯ ಕರ್ನಾಟಕ | ಬಾಗಲಕೋಟೆ | 30 ಜುಲೈ 2022 ಶನಿವಾರ

# ಎನ್‌ಎಸ್‌ಎಸ್ ಶಿಬಿರಕ್ಕೆ ಗಾಂಧಿ ತತ್ವ ಆಧಾರ

ತಾಳಿಕೋಟೆ : ಗ್ರಾಮೀಣ ಜನರ ಬದುಕು ಹಸನಾಗಬೇಕಾದರೆ ಎನ್‌ಎಸ್‌ಎಸ್ ವಿದ್ಯಾರ್ಥಿಗಳು ಸ್ವಚ್ಛ ಭಾರತ ಜಾಗೃತಿಯ ಜೊತೆಗೆ ಶ್ರಮದಾನವೆಂಬುದು ಬಹು ಮುಖ್ಯ ಎಂದು ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾ. ಡಾ. ವೂಡೇ ಪಿ.ಕೃಷ್ಣ ಹೇಳಿದರು.

75ನೇ ಸ್ವಾತಂತ್ರ್ಯ ಅಮೃತ ಮಹೋತ್ಸವ ಅಂಗವಾಗಿ ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ರಾಷ್ಟ್ರೀಯ ಸೇವಾ ಯೋಜನೆ, ಯುವ ಸಬಲೀಕರಣ ಇಲಾಖೆ ಹಾಗೂ ಎಚ್.ಎಸ್. ಪಾಟೀಲ ಸ್ವತಂತ್ರ ಪದವಿಪೂರ್ವ ಮಹಾವಿದ್ಯಾಲಯದ ಸಂಯುಕ್ತಾಶ್ರಯದಲ್ಲಿ ಸಂಗಮೇಶ್ವರ ಸಭಾಭವನದಲ್ಲಿ ನಡೆದ ಎನ್‌ಎಸ್‌ಎಸ್ ಶಿಬಿರಾರ್ಥಿಗಳಿಗೆ 4ನೇ ದಿನದ ಕಾರ್ಯಾಗಾರ ಹಾಗೂ ಶ್ರಮದಾನ ಶಿಬಿರದಲ್ಲಿ ಅವರು ಮಾತನಾಡಿದರು. ಸೇವೆ ಮತ್ತು ತ್ಯಾಗವನ್ನು ಯಾರು ಮಾಡುತ್ತಾರೋ ಅವರನ್ನು ಜಗತ್ತು ಸ್ಮರಿಸುತ್ತದೆ. ನಿಮ್ಮ ಚಿಂತನೆಗಳು ಯಾವಾಗಲೂ ಬಡವರ ಪರ, ರೈತರ ಪರ ಮತ್ತು ಹಳ್ಳಿಯ ಪರವಾಗಿರಬೇಕು. ಎನ್.ಎಸ್.ಎಸ್. ಶಿಬಿರವು ಗಾಂಧಿಯವರ ತತ್ವಗಳನ್ನು ಆಧರಿಸಿವೆ ಎಂದರು.

ಸಾಹಿತಿ ಬಿ.ಆರ್. ಪೊಲೀಸ್‌ಪಾಟೀಲ ಮಾತನಾಡಿ, ಎನ್‌ಎಸ್‌ಎಸ್ ವಿದ್ಯಾರ್ಥಿಗಳು ಮಾಡುವ ಪ್ರತಿ ಕಾರ್ಯವು ಜೀವನಕ್ಕೆ ದಾರಿ ತೋರಿಸುತ್ತದೆ ಅಲ್ಲದೇ ಸಮಾಜಕ್ಕೆ ಮಾದರಿಯಾಗುತ್ತದೆ ಎಂದರು. ತಾಳಿಕೋಟೆ ತಾಲೂಕಿನ ಕಸಾಪ ಅಧ್ಯಕ್ಷ ಆರ್.ಎಲ್. ಕೊಪ್ಪದ ಎನ್‌ಎಸ್‌ಎಸ್ ಧ್ಯೇಯೋದ್ದೇಶ ಮತ್ತು ಸದೃಢ ದೇಹದ ಜೊತೆ ಉತ್ತಮ ಆರೋಗ್ಯ ಕುರಿತು ವಿದ್ಯಾರ್ಥಿಗಳಿಗೆ ತಿಳಿ ಹೇಳಿದರು.

ಕಪ್ಪತಗುಡ್ಡ ನಂದಿವೇರಿ ಸಂಸ್ಥಾನಮಠದ ಶಿವಕುಮಾರ ಸ್ವಾಮೀಜಿ ಸಾನ್ನಿಧ್ಯ ವಹಿಸಿದ್ದರು. ಪ್ರಾಚಾರ್ಯೆ ಮಲ್ಲಮ್ಮ ಬಿರಾದಾರ, ಶಿಕ್ಷಕ ಭೀಮಣ್ಣ ಆರಕೇರಿ, ಸಂಸ್ಥೆಯ ಕಾರ್ಯದರ್ಶಿ ಸಂತೋಷ ಪಾಟೀಲ, ಸುನೀಲ ಪಾಟೀಲ, ಕಿರಣ ಪಾಟೀಲ, ಪ್ರಾಚಾರ್ಯ ಅಶೋಕ ಕಟ್ಟಿ, ಎಸ್.ವಿ. ಜಾಮಗೊಂಡಿ, ಎಸ್.ಸಿ. ಗುಡಗುಂಟಿ, ಎನ್.ಬಿ. ಪಾಟೀಲ, ಎಂ.ಎಸ್. ರಾಯಗೊಂಡ, ಎಸ್.ಬಿ. ಮಂಗ್ಯಾಳ, ವಿ.ಎಚ್. ಘಟನೂರ, ಎ.ಸಿ. ಗುಮಶೆಟ್ಟಿ, ಜ್ಯೋತಿ ಪೊಲೀಸಪಾಟೀಲ, ಜೆ.ಎಂ. ಕೊಣ್ಣೂರ, ಮುತ್ತು ಬಿರಾದಾರ, ವಿಠ್ಠಲ ವಿಜಾಪುರ, ಎಸ್.ಎಸ್. ಪಾಟೀಲ, ಆರ್.ಎಚ್. ಯರದಿಹಾಳ, ವಿ.ಎಸ್. ಬಿರಾದಾರ, ಪ್ರಕಾಶ ಪಾಟೀಲ, ಆರ್.ಬಿ.ಪಾಟೀಲ, ಎಸ್.ಬಿ. ಸಾತಕೇಡ, ಎಸ್.ಎಸ್. ಬಿದರಕುಂದಿ, ಶಿವು ನಾಯಕ, ಎಸ್.ಎಂ. ಸಜ್ಜನ, ಜಿ.ಎಸ್. ಹೆಸರೂರ, ಸನಾ ಪಠಾಣ, ಎಸ್.ಎಂ. ಖಿಂಡಿಮನಿ, ಪ್ರಕಾಶ ವಾಲಿಕಾರ ಮೊದಲಾದವರು ಇದ್ದರು.

ಪ್ರಕಾಶ ಪಾಟೀಲ, ಬಿ.ಐ. ಹಿರೇಹೊಳಿ, ಎಸ್.ಸಿ. ಗುಡಗುಂಟಿ ಕಾರ್ಯಕ್ರಮ ನಿರ್ವಹಿಸಿದರು.



ಕಾರ್ಯಾಗಾರದಲ್ಲಿ ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾ. ಡಾ.ವೂಡೇ ಪಿ.ಕೃಷ್ಣ ಅವರನ್ನು ಸನ್ಮಾನಿಸಲಾಯಿತು.

ಪ್ರಜಾವಾಣಿ ಶುಕ್ರವಾರ • ಜುಲೈ 29, 2022



ತಾಳಿಕೋಟೆ ಪಟ್ಟಣದ ಸಂಗಮೇಶ್ವರ ಸಭಾ ಭವನದಲ್ಲಿ ನಡೆದ ಎನ್‌ಎಸ್‌ಎಸ್ ಶಿಬಿರದಲ್ಲಿ ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ ಅವರನ್ನು ಗೌರವಿಸಲಾಯಿತು

# ‘ಬಡವರ ಪರ ಚಿಂತನೆಯಿರಲಿ’

ಪ್ರಜಾವಾಣಿ ವಾರ್ತೆ

ತಾಳಿಕೋಟೆ: ಗ್ರಾಮೀಣ ಜನರ ಬದುಕು ಹಸನಾಗಬೇಕು. ಸೇವೆ ಮತ್ತು ತ್ಯಾಗ ಮಾಡುವವರನ್ನು ಜಗತ್ತು ಸ್ಮರಿಸುತ್ತದೆ. ನಿಮ್ಮ ಚಿಂತನೆಗಳು ಬಡವರ ಪರ,ರೈತರ ಪರ ಮತ್ತು ಹಳ್ಳಿಯ ಪರವಾಗಿರಬೇಕು ಎಂದು ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ ಹೇಳಿದರು.

ಪಟ್ಟಣದ ಸಂಗಮೇಶ್ವರ ಸಭಾ ಭವನದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಬೆಂಗಳೂರು ರಾಷ್ಟ್ರೀಯ ಸೇವಾ ಯೋಜನೆ, ಯುವ ಸಬಲೀಕರಣ ಇಲಾಖೆ ಹಾಗೂ ಇಲ್ಲಿನ ಎಚ್.ಎಸ್. ಪಾಟೀಲ ಸ್ವತಂತ್ರ ಪದವಿ ಪೂರ್ವ ಮಹಾವಿದ್ಯಾಲಯದ ಸಹಯೋಗದಲ್ಲಿ ಸ್ವಾತಂತ್ರ್ಯೋತ್ಸವ ಅಮೃತ ಮಹೋತ್ಸವದ ಅಂಗವಾಗಿ ಆಯೋಜಿಸಿದ್ದ ಎನ್.ಎಸ್.ಎಸ್. ಶಿಭಿರದದಲ್ಲಿ ಮಾತನಾಡಿದರು.

ಸಾನ್ನಿಧ್ಯ ವಹಿಸಿದ್ದ ನಂದಿವೇರಿ ಸಂಸ್ಥಾನಮಠ, ಕಪ್ಪತಗುಡ್ಡದ ಶಿವಕುಮಾರ ಸ್ವಾಮೀಜಿ, ಅಧ್ಯಕ್ಷತೆ ವಹಿಸಿದ್ದ ಸಂಸ್ಥೆಯ ಅಧ್ಯಕ್ಷ ಎಚ್ .ಎಸ್.ಪಾಟೀಲ ಮಾತನಾಡಿದರು.

ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಆರ್.ಎಲ್. ಕೊಪ್ಪದ,.ಪ್ರಾಚಾರ್ಯೆ ಮಲ್ಲಮ್ಮ ಎಸ್.ಬಿರಾದಾರ ಇದ್ದರು.

ಅತಿಥಿಯಾಗಿದ್ದ ಸಾಹಿತಿ ಬಿ.ಆರ್.ಪೋಲಿಸ್ ಪಾಟೀಲ ಅವರು ಪ್ರಾಸ್ತಾವಿಕವಾಗಿ ಮಾತನಾಡಿದರು. ಪ್ರಕಾಶ.ಪಾಟೀಲ ಸ್ವಾಗತಿಸಿದರು. ಬಿ.ಐ.ಹಿರೇಹೊಳಿ ನಿರೂಪಿಸಿದರು. ಎಸ್.ಸಿ.ಗುಡಗುಂಟಿ ವಂದಿಸಿದ್ದರು.

ಪ್ರಜಾವಾಣಿ
ಬುಧವಾರ ○ ಜುಲೈ 27, 2022



ಯಲಹಂಕದ ಶೇಷಾದ್ರಿಪುರ ಪ್ರಥಮದರ್ಜೆ ಕಾಲೇಜಿನಲ್ಲಿ ನಡೆದ ಕಾರ್ಯಕ್ರಮದಲ್ಲಿ ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳಲ್ಲಿ 20 ಬಸವ ಅಧ್ಯಯನ ಕೇಂದ್ರಗಳಿಗೆ ಶಿಕ್ಷಣತಜ್ಞ ಡಾ.ವೂಡೆ ಪಿ. ಕೃಷ್ಣ ಚಾಲನೆ ನೀಡಿದರು. ಶಿವರುದ್ರ ಸ್ವಾಮೀಜಿ, ಅರವಿಂದ ಜತ್ತಿ, ಎನ್‌ಆರ್‌ಪಂಡಿತಾರಾಧ್ಯ ಹಾಜರಿದ್ದರು

# ಬಸವ ಅಧ್ಯಯನ ಕೇಂದ್ರಗಳಿಗೆ ಚಾಲನೆ

ಪ್ರಜಾವಾಣಿ ವಾರ್ತೆ

ಯಲಹಂಕ: ಬಸವಣ್ಣ ಅವರ ತತ್ವಗಳು ಬಹಳ ಸರಳ ಮತ್ತು ಸುಲಭವಾಗಿದ್ದು, ಇವುಗಳನ್ನು ನಿತ್ಯಜೀವನದಲ್ಲಿ ಅಳವಡಿಸಿ-ಕೊಂಡರೆ ದೊಡ್ಡ ಮಾರ್ಪಾಡು ಆಗಲಿದೆ ಎಂದು ಬೇಲಿಮಠ ಮಹಾಸಂಸ್ಥಾನದ ಶಿವರುದ್ರ ಸ್ವಾಮೀಜಿ ಅವರು ಅಭಿಪ್ರಾಯಪಟ್ಟರು.

ಶೇಷಾದ್ರಿಪುರ ಪ್ರಥಮದರ್ಜೆ ಕಾಲೇಜಿನಲ್ಲಿ ನಡೆದ ಕಾರ್ಯಕ್ರ-ಮದಲ್ಲಿ ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳಲ್ಲಿ '20 ಬಸವ ಅಧ್ಯಯನ ಕೇಂದ್ರಗಳ' ಉದ್ಘಾಟನಾ ಸಮಾರಂಭದಲ್ಲಿ ಮಾತನಾಡಿದ ಅವರು, ಎಲ್ಲ ಮಹಾನ್ ಪುರುಷರ ಚಿಂತನೆಗಳು ನಮ್ಮ ಮನಸ್ಸಿನಲ್ಲಿ ಆಳವಾಗಿ ಬೇರೂರಬೇಕಾದರೆ ನಿರಂತರ ಅಧ್ಯಯನದ ಅಗತ್ಯವಿದೆ ಎಂದು ಹೇಳಿದರು.

ಬಸವ ಸಮಿತಿಯ ಅಧ್ಯಕ್ಷ ಅರವಿಂದ ಜತ್ತಿ ಮಾತನಾಡಿದರು. ಶಿಕ್ಷಣ ತಜ್ಞ ಡಾ.ವೂಡೆ ಪಿ. ಕೃಷ್ಣ, ಶೇಷಾದ್ರಿಪುರ ಶಿಕ್ಷಣ ದತ್ತಿಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಉಪಾಧ್ಯಕ್ಷ ಟಿ.ಎಸ್. ಹೆಂಜಾರಪ್ಪ, ಡಬ್ಲ್ಯು.ಎಚ್.ಅನಿಲ್ ಕುಮಾರ್, ಖಜಾಂಚಿ ಬಿ.ಎಂ.ಪಾರ್ಥಸಾರಥಿ, ಸಹಾಯಕ ಕಾರ್ಯದರ್ಶಿ ಎಂ.ಎಸ್. ನಟರಾಜ, ಟ್ರಸ್ಟಿ ಕೃಷ್ಣಸ್ವಾಮಿ, ಪ್ರಾಂಶುಪಾಲ ಡಾ.ಎಸ್.ಎನ್. ವೆಂಕಟೇಶ್ ಮತ್ತಿತರರು ಉಪಸ್ಥಿತರಿದ್ದರು.

ಸಂಜೆವಾಣಿ
ಗುರುವಾರ 15 ಸೆಪ್ಟೆಂಬರ್ 2022





ವೀಡಿಯೋಗಾಗಿ ಸ್ಕ್ಯಾನ್ ಮಾಡಿ

ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಎಂ.ವಿ.ಆರ್. ಫೌಂಡೇಷನ್ ವತಿಯಿಂದ ಇಂದು ನಡೆದ 'ಗೋವು ಆಧಾರಿತ ಕೃಷಿ' ಕಾರ್ಯಕ್ರಮವನ್ನು ಮಾಜಿ ರಾಜ್ಯ ಸಭಾ ಸದಸ್ಯ ಡಾ. ಹೆಚ್. ಹನುಮಂತಪ್ಪ ಉದ್ಘಾಟಿಸಿದರು. ನಾಡೋಜ ಡಾ. ವೂಡೇ ಪಿ. ಕೃಷ್ಣ, ಇಂದಿರಾ ಕೃಷ್ಣಪ್ಪ ಮತ್ತಿತರರು ಇದ್ದಾರೆ.

ಸಂಜೆವಾಣಿ

ಕಲಬುರಗಿ
ಬುಧವಾರ 27 ಜುಲೈ 2022

# ಸೇವೆ ಮತ್ತು ತ್ಯಾಗವನ್ನು ಜಗತ್ತು ಸ್ಮರಿಸುತ್ತದೆ:ಡಾ.ವೂಡೇ ಪಿ.ಕೃಷ್ಣ



ತಾಳಿಕೋಟೆ:ಜು.27:ಗ್ರಾಮೀಣ ಭಾರತವೇ ನಿಜವಾದ ಭಾರತವಾಗಿದೆ ಹಾಗೆಯೇ ಗ್ರಾಮೀಣ ಜನರ ಬದುಕು ಹಸನಾಗಬೇಕಾದರೆ ಎನ್‌ಎಸ್‌ಎಸ್ ವಿದ್ಯಾರ್ಥಿಗಳು ಸ್ವಚ್ಛ ಭಾರತ ಜಾಗೃತಿಯ ಜೊತೆಗೆ ಶ್ರಮದಾನವೆಂಬುದು ಬಹು ಮುಖ್ಯವಾಗಿದೆ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ,ಬೆಂಗಳೂರು ಇದರ ಅಧ್ಯಕ್ಷರಾದ ನಾಡೋಜ ಡಾ.ವೂಡೇ ಪಿ.ಕೃಷ್ಣ ಅವರು ಹೇಳಿದರು.

75ನೇ ಸ್ವಾತಂತ್ರ್ಯ ಅಮೃತ ಮಹೋತ್ಸವ ಅಂಗವಾಗಿ ಕರ್ನಾಟಕ ಸರ್ಕಾರದ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಬೆಂಗಳೂರ,ರಾಷ್ಟ್ರೀಯ ಸೇವಾ ಯೋಜನೆ, ಯುವ ಸಬಲೀಕರಣ ಇಲಾಖೆ ಹಾಗೂ ಶ್ರೀ ಎಚ್.ಎಸ್.ಪಾಟೀಲ ಸ್ವತಂತ್ರ ಪದವಿಪೂರ್ವ ಮಹಾವಿದ್ಯಾಲಯದ ಸಂಯುಕ್ತ ಆಶ್ರಯದಲ್ಲಿ ಶ್ರೀ ಸಂಗಮೇಶ್ವರ ಸಭಾಭವನದಲ್ಲಿ ನಡೆದ ಎನ್‌ಎಸ್‌ಎಸ್ ಶಿಬಿರಾರ್ಥಿಗಳಿಗೆ 4ನೇ ದಿನದ ಕಾರ್ಯಾಗಾರ ಹಾಗೂ ಶ್ರಮದಾನ ಶಿಬಿರದ ಪ್ಲಾಸ್ಟಿಕ್ ಸ್ವಚ್ಛಿಸಿ ಪರಿಸರ ಉಳಿಸಿ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಆಗಮಿಸಿ ಮಾತನಾಡುತ್ತಿದ್ದ ಅವರು ಸೇವೆ ಮತ್ತು ತ್ಯಾಗವನ್ನು ಯಾರು ಮಾಡುತ್ತಾರೋ ಅವರನ್ನು ಜಗತ್ತು ಸ್ಮರಿಸುತ್ತದೆ. ನಿಮ್ಮ ಚಿಂತನೆಗಳು ಯಾವಾಗಲೂ ಬಡವರ ಪರ, ರೈತರ ಪರ ಮತ್ತು ಹಳ್ಳಿಯ ಪರವಾಗಿರಬೇಕು. ಎನ್.ಎಸ್.ಎಸ್ ಶಿಬಿರವು ಗಾಂಧಿಯವರ ತತ್ವಗಳನ್ನು ಆಧರಿಸಿದೆ.ಪ್ರತಿಯೊಬ್ಬರೂ ನಿಸ್ವಾರ್ಥ ಭಾವದಿಂದ ಕೆಲಸ ಮಾಡಿದಾಗ ಮಾತ್ರ ದೇಶ ಅಭಿವೃದ್ಧಿ ಹೊಂದಲು ಸಾಧ್ಯವೆಂದ ಅವರು ದೇಶ ಸಾಕಷ್ಟು ಸಮಸ್ಯೆಗಳನ್ನು ಎದುರಿಸುತ್ತಿದೆ.ಇಂತಹ ಸಂದರ್ಭದಲ್ಲಿ ದಾನಗಳಲ್ಲೇ ಶ್ರೇಷ್ಠ ದಾನವಾದ ಶ್ರಮದಾನದ ಮೂಲಕ ದೇಶ ಸೇವೆ ಮಾಡಿ ಜೀವನ ಸಾರ್ಥಕ ಮಾಡಿಕೊಳ್ಳಿರಿ ಎಂದು ಹೇಳಿದ ಅವರು ರೂರಲ್ ಇಂಡಿಯಾ ಇಸ್ ದಿ ರಿಯಲ್ ಇಂಡಿಯಾ ಎಂದು ಗಾಂಧಿಯವರು ಹೇಳಿದ ಮಾತನ್ನು ಸ್ಮರಿಸಿಕೊಂಡರು.

ಇನ್ನೋರ್ವ ಅತಿಥಿಗಳಾದ ಖ್ಯಾತ ಸಾಹಿತಿಗಳಾದ ಬಿ.ಆರ್.ಪೋಲಿಸ್‌ಪಾಟೀಲ ಪ್ರಾಸ್ತಾವಿಕವಾಗಿ ಮಾತನಾಡಿ ಎನ್‌ಎಸ್‌ಎಸ್ ವಿದ್ಯಾರ್ಥಿಗಳು ಮಾಡುವ ಪ್ರತಿ ಕಾರ್ಯವು ಜೀವನಕ್ಕೆ ದಾರಿ ತೋರಿಸುತ್ತದೆ ಅಲ್ಲದೇ ಸಮಾಜಕ್ಕೆ ಮಾದರಿಯಾಗುತ್ತದೆ ಎನ್.ಎಸ್.ಎಸ್. ಘಟಕ ಲೈಫ್ ಟೈಮ್ ವರ್ಕಶಾಪ್ ಆಗಿ ಕಾರ್ಯನಿರ್ವಹಿಸಬೇಕೆಂದರು.

ಇನ್ನೋರ್ವ ಅತಿಥಿ ತಾಳಿಕೋಟೆ ತಾಲ್ಲೂಕಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಆರ್.ಎಲ್.ಕೊಪ್ಪದ ಎನ್‌ಎಸ್‌ಎಸ್ ದ್ಯೇಯೋದ್ದೇಶ ಮತ್ತು ಸದೃಢ ದೇಹದ ಜೊತೆ ಉತ್ತಮ ಆರೋಗ್ಯ ಕುರಿತು ವಿದ್ಯಾರ್ಥಿಗಳಿಗೆ ತಿಳಿ ಹೇಳಿದರು.

ಸಾನಿಧ್ಯ ವಹಿಸಿದ್ದ ಕಪ್ಪತಗುಡ್ಡ ಶ್ರೀ ನಂದಿವೇರಿ ಸಂಸ್ಥಾನಮಠದ ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಮಾತನಾಡಿ ಎಲ್ಲರೂ ಬುದ್ಧ,ಬಸವ,ಗಾಂಧಿ, ಅಂಬೇಡ್ಕರ್ ಮುಂತಾದವರ ತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕೆಂದು ಅವರ ಆದರ್ಶ ವಿದ್ಯಾರ್ಥಿಗಳಿಗೆ ಸ್ಫೂರ್ತಿದಾಯಕವಾಗಿದ್ದು ಅವರಂತೆ ಜಗತ್ತಿನಲ್ಲಿ ಗುರುತಿಸಿಕೊಳ್ಳುವಂತಹ ಸಾಧನೆ ಮಾಡಬೇಕೆಂದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಎಸ್.ಎಸ್.ವಿದ್ಯಾ ಸಂಸ್ಥೆಯ ಅಧ್ಯಕ್ಷರಾದ ಎಚ್.ಎಸ್.ಪಾಟೀಲ ಅವರು ಸುಂದರ ಪರಿಸರ ಕಲ್ಪನೆಯನ್ನು ವಿದ್ಯಾರ್ಥಿಗಳು ಜೀವನದಲ್ಲಿ ಕಟ್ಟಿಕೊಳ್ಳುವ ಕುರಿತು ತಿಳಿ ಹೇಳಿದರು.

ಪ್ರಾಚಾರ್ಯರಾದ ಶ್ರೀಮತಿ ಮಲ್ಲಮ್ಮ.ಎಸ್.ಬಿರಾದಾರ,ಶಿಕ್ಷಕ ಭೀಮಣ್ಣ ಅರಕೇರಿ ಸಂಸ್ಥೆಯ ಕಾರ್ಯದರ್ಶಿ ಸಂತೋಷ ಪಾಟೀಲ, ಸುನೀಲ ಪಾಟೀಲ, ಕಿರಣ ಪಾಟೀಲ, ಪ್ರಾಚಾರ್ಯ ಅಶೋಕ ಕಟ್ಟಿ, ಎಸ್.ವ್ಹಿ. ಜಾಮಗೊಂಡಿ,ಎಸ್.ಸಿ.ಗುಡಗುಂಟಿ, ಎಸ್.ಬಿ.ಪಾಟೀಲ, ಎಂ.ಎಸ್. ರಾಯಗೊಂಡ,ಎಸ್.ಬಿ.ಮಂಗ್ಯಾಳ, ವ್ಹಿ.ಎಚ್.ಘಟನೂರ, ಶ್ರೀಮತಿ ಎ.ಸಿ.ಗುಮಶೆಟ್ಟಿ, ಕುಮಾರಿ ಜ್ಯೋತಿ ಪೋಲೀಸಪಾಟೀಲ, ಜೆ.ಎಂ.ಬೊಮ್ಮನ್ನರ, ಮುತ್ತು ಬಿರಾದಾರ, ವಿಠ್ಠಲ ವಿಜಾಪೂರ, ಎಸ್.ಎಸ್.ಪಾಟೀಲ, ಕುಮಾರಿ ಆರ್.ಎಚ್.ಯರದಿಹಾಳ, ವ್ಹಿ.ಎಸ್.ಬಿರಾದಾರ, ಪ್ರಕಾಶ ಪಾಟೀಲ, ಆರ್.ಬಿ.ಪಾಟೀಲ, ಶ್ರೀಮತಿ ಎಸ್.ಬಿ.ಸಾತಕೇಡ, ಎಸ್.ಎಸ್.ಬಿದರಕುಂದಿ, ಶಿವು ನಾಯಕ,ಎಸ್.ಎಂ.ಸಜ್ಜನ,ಜಿ.ಎಸ್. ಹೆಸರೂರ,ಶ್ರೀಮತಿ ಸನಾ ಪಠಾಣ, ಎಸ್.ಎಂ.ಬಿಂಡಿಮನಿ, ಪ್ರಕಾಶ ವಾಲಿಕಾರ, ಮೊದಲಾದವರು ಇದ್ದರು.

ಪ್ರಕಾಶ ಪಾಟೀಲ ಸ್ವಾಗತಿಸಿದರು, ಬಿ.ಬಿ.ಹಿರೇಹೊಳಿ ನಿರೂಪಿಸಿದರು, ಎಸ್.ಸಿ.ಗುಡಗುಂಟಿ ವಂದಿಸಿದರು.

ಸಂಯುಕ್ತ ಕರ್ನಾಟಕ ಸೋಮವಾರ 25 ಜುಲೈ 2022

# ಹೆಣ್ಣು ಅಬಲೆಯಲ್ಲ ಸಬಲೆ

ಬೆಂಗಳೂರು: ಹೆಣ್ಣು ಅಬಲೆಯಲ್ಲ ಸಬಲೆ, ಪುರುಷ ಪ್ರಧಾನವ್ಯವಸ್ಥೆಯಲ್ಲಿ ಆಕೆಸಾಧನೆಯ ಹಾದಿಯಲ್ಲಿ ಮುನ್ನಡೆದಿದ್ದಾಳೆ ಎಂದು ಖ್ಯಾತ ಶಿಕ್ಷಣ ತಜ್ಞೆ ಡಾ.ಗೀತಾರಾಮನುಜಂ ಅಭಿಪ್ರಾಯಪಟ್ಟರು.

ಬುದ್ಧ-ಬಸವ-ಗಾಂಧಿ ಸಾಂಸ್ಕೃತಿಕ ಟ್ರಸ್ಟ್, ಕೇಂದ್ರ ಸಾಹಿತ್ಯ ಅಕಾಡೆಮಿಯ ಸಹಯೋಗದೊಂದಿಗೆ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಏರ್ಪಡಿಸಿದ್ದ ರಾಜ್ಯ ಮಟ್ಟದ ನಾಲ್ಕನೇ ಮಹಿಳಾ ಸಾಂಸ್ಕೃತಿಕ ಸಮಾವೇಶವನ್ನು ಉದ್ಘಾಟಿಸಿದ ಅವರು, ಹೆಣ್ಣನ್ನು ಕೇವಲವಾಗಿ ಗ್ರಹಿಸುವ ಕಾಲ ಹೋಗಿದೆ. ಆಕೆಯಿಲ್ಲದೆ ಯಾವುದೂ ಏಳಿಗೆಯಾಗುವುದಿಲ್ಲ. ಆದ್ದರಿಂದ ಮಹಿಳೆಯರಿಗೆ ರಾಜಕೀಯ, ಸಾಮಾಜಿಕ, ಆರ್ಥಿಕ ನೆಲಗಟ್ಟಿನಲ್ಲಿ ಸ್ವಾತಂತ್ರ್ಯ ನೀಡಿ ಅಧಿಕಾರ ನೀಡುವ ಅಗತ್ಯ ಇದೆ ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಕೃತಿ ಲೋಕಾರ್ಪಣೆಗೊಳಿಸಿ ಮಾತನಾಡಿ, ಮಹಿಳೆ ಸ್ವಾವಲಂಬಿಯಾಗಿ ಬಾಳಬೇಕಾದರೆ ಮೊದಲು ಮನೆಯಲ್ಲಿ ಆಕೆಗೆ ಗೌರವ ಸಿಗಬೇಕು. ಪುರುಷ ಮತ್ತು ಮಹಿಳೆ ಸಮಾನತೆ ಇರಬೇಕು. ಸತಿಪತಿಗಳೊಂದಾದ ಭಕ್ತಿ ಶಿವನಿಗೆ ಭಗವಂತನಿಗೆ ಹಿತವಾಗುತ್ತದೆ ಎಂದು ಬಸವಣ್ಣ, ಗಾಂಧೀಜಿ ಹೇಳಿದ ಮಾರ್ಗದಲ್ಲಿ ನಾವೆಲ್ಲ ದಾಪುಗಾಲಿಡಬೇಕೆಂದರು.

ಕೇಂದ್ರ ಸಾಹಿತ್ಯ ಅಕಾಡೆಮಿ ಸದಸ್ಯೆ ಡಾ.ಪದ್ಮಿನಿ ನಾಗರಾಜು ಮಾತನಾಡಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಮಾನತೆ ಸಿಗಬೇಕು. ಆಕೆಗೆ ಗೌರವ ಪ್ರಶಸ್ತಿ ಸಲ್ಲಬೇಕು. ಮಹಿಳೆ ಏನು ಬರೆಯಬಲ್ಲಳು ಎಂಬ ತಾತ್ಸಾರ ಬಿಡಬೇಕೆಂದರು.

ಸಂಸ್ಥೆಯ ಅಧ್ಯಕ್ಷ ಡಾ. ಸಿಸಿರಾ ಪ್ರಾಸ್ತಾವಿಕವಾಗಿ ಮಾತನಾಡಿದರು. ಸಮಾವೇಶದ ಸರ್ವಾಧ್ಯಕ್ಷರಾಗಿ ಕಮಲಾ ರಾಜೇಶ್ ಮಾತನಾಡಿ ತಂದೆ, ತಾಯಿ, ಪತಿ, ಮಕ್ಕಳ ಬೆಂಬಲದಿಂದಾಗಿ ತಾವು ಸಾಹಿತ್ಯ ರಚಿಸಿದ್ದರಿಂದ ಇಂತಹ ವೇದಿಕೆಯಲ್ಲಿ ಗೌರವ ದೊರೆಯುವಂತಾಗಿದೆ ಎಂದರು, ಸಮಾರಂಭದಲ್ಲಿ ಸಾಧಕರಿಗೆ ಸಿದ್ದನಹಳ್ಳಿ ಸಿದ್ದೇಗೌಡ ಪದ್ಮ ಸ್ಮಾರಕ ದತ್ತಿ ಪ್ರಶಸ್ತಿ ಪುರಸ್ಕಾರ ಮಾಡಲಾಯಿತು.

ಡಾ.ಕೃಷ್ಣಹಾನ್‌ಬಾಳ್, ಇಂದಿರಾಕೃಷ್ಣಾ, ಲೀಲಾ ವಾಸುದೇವ್, ಡಾ. ಮಂಗಳಗೌರಿ ಅರಸು ಇನ್ನಿತರರು ಪಾಲ್ಗೊಂಡಿದ್ದರು.



ಈ ಸಂಜೆ

Sun, 24 July 2022



ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ನಗರದಲ್ಲಿಂದು ಹಮ್ಮಿಕೊಂಡಿದ್ದ ರಾಜ್ಯಮಟ್ಟದ ನಾಲ್ಕನೆ ಮಹಿಳಾ ಸಾಂಸ್ಕೃತಿಕ ಸಮಾವೇಶದಲ್ಲಿ ಸಾಹಿತಿ ಕಮಲಾ ರಾಜೇಶ್ ಅವರನ್ನು ಸನ್ಮಾನಿಸಲಾಯಿತು. ಸಾಹಿತಿ ವಿ.ಮಂಜುಳಾ, ನಾಡೋಜ ಡಾ.ಪ್ರೊಡೇ ಪಿ.ಕೃಷ್ಣ, ಡಾ.ಗೀತಾ ರಾಮಾನುಜಂ, ಡಾ.ರಾಮಲಿಂಗೇಶ್ವರ ಮತ್ತಿತರರು ಪಾಲ್ಗೊಂಡಿದ್ದರು.

ಪ್ರಜಾವಾಣಿ
ಗುರುವಾರ ● ಜುಲೈ 14, 2022

ಸಮ್ಮೇಳನ, ವಿಚಾರಸಂಕಿರಣ, ವಿಚಾರ ಗೋಷ್ಠಿ ಮೂಲಕ ಹೋರಾಟಗಾರರ ಪರಿಚಯ

# '19 ಗಡಿ ಜಿಲ್ಲೆಗಳಲ್ಲಿ ಏಕೀಕರಣಕ್ಕೆ ಶ್ರಮಿಸಿದ ವ್ಯಕ್ತಿಗಳ ಸ್ಮರಣೆ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಕರ್ನಾಟಕ ಏಕೀಕರಣಕ್ಕಾಗಿ ಹೋರಾಟ ನಡೆಸಿದ ಮಹನೀಯರನ್ನು ಸ್ಮರಿಸುವ ಕಾರ್ಯಕ್ರಮಗಳನ್ನು 19 ಗಡಿ ಜಿಲ್ಲೆಗಳಲ್ಲಿ ಆಯೋಜಿಸಲಾಗುವುದು' ಎಂದು ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಸಿ. ಸೋಮಶೇಖರ್ ತಿಳಿಸಿದರು.

ಮಂಗಳವಾರ ನಡೆದ ಆಲೂರು ವೆಂಕಟರಾಯರ ಜನ್ಮದಿನಾಚರಣೆ ಹಾಗೂ ಫ.ಗು. ಹಳಕಟ್ಟಿ ಅವರ ಸ್ಮರಣೆ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, 'ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಮತ್ತು ಕನ್ನಡ ಸಾಹಿತ್ಯ ಪರಿಷತ್ ವತಿಯಿಂದ ಈ ಮಹನೀಯರನ್ನು ಸ್ಮರಿಸುವ ಕಾರ್ಯಕ್ರಮಗಳನ್ನು ಆಯೋಜಿಸಲಾಗುವುದು' ಎಂದು ತಿಳಿಸಿದರು.



ನಗರದಲ್ಲಿ ಮಂಗಳವಾರ ಆಯೋಜಿಸಿದ್ದ ಆಲೂರು ವೆಂಕಟರಾಯರ ಜನ್ಮದಿನಾಚರಣೆ ಮತ್ತು ಫ.ಗು. ಹಳಕಟ್ಟಿ ಅವರ ಸ್ಮರಣೆ ಕಾರ್ಯಕ್ರಮದಲ್ಲಿ ಶ್ರೀನಿವಾಸ ವಾಡಪ್ಪಿ, ವೂಡೇ ಪಿ. ಕೃಷ್ಣ, ಅರವಿಂದ ಜತ್ತಿ, ಮಹೇಶ ಜೋಶಿ, ಸಿ. ಸೋಮಶೇಖರ್ ಹಾಗೂ ಪ್ರಕಾಶ್ ಮತ್ತೀಹಳ್ಳಿ ಪುಷ್ಪ ನಮನ ಸಲ್ಲಿಸಿದರು – ಪ್ರಜಾವಾಣಿ ಚಿತ್ರ

'19 ಗಡಿ ಜಿಲ್ಲೆಗಳಲ್ಲೂ ಸಮ್ಮೇಳನ, ವಿಚಾರಸಂಕಿರಣ, ವಿಚಾರ ಗೋಷ್ಠಿ ಹಮ್ಮಿಕೊಳ್ಳುವ ಮೂಲಕ ಹೋರಾಟಗಾರರ ಬದುಕು ಮತ್ತು ಸಾಧನೆಗಳನ್ನು ಪರಿಚಯ ಮಾಡಿಕೊಡಲಾಗುವುದು' ಎಂದು ತಿಳಿಸಿದರು.

ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಮಹೇಶ ಜೋಶಿ ಮಾತನಾಡಿ, 'ಕನ್ನಡ ನಾಡಿನಲ್ಲಿ ಏಕೀಕರಣದ ಬೀಜ ಬಿತ್ತಿದವರಲ್ಲಿ ಆಲೂರು ವೆಂಕಟರಾಯರೂ ಸೇರಿದ್ದಾರೆ. ಮರಾಠರು ಅಧಿಕವಾಗಿದ್ದ ಪ್ರದೇಶದಲ್ಲಿ ಕನ್ನಡ ಕಹಳೆ ಮೊಳಗಿಸಿ ಭಾಷೆಯ ಬೆಳವಣಿಗೆಗೆ ಕಾರಣರಾಗಿದ್ದಾರೆ. ಹಾಗೆಯೇ ವಚನ ಸಾಹಿತ್ಯ ಭದ್ರವಾಗಿ ಉಳಿಯುವಲ್ಲಿ ಫ.ಗು. ಹಳಕಟ್ಟಿ ಅವರ ಪಾತ್ರ ಸಹ ಸ್ಮರಣೀಯ' ಎಂದು ಹೇಳಿದರು.



'ಆಲೂರು ವೆಂಕಟರಾಯರ ಕೊಡುಗೆ' ಕುರಿತು ಸಾಹಿತಿ ಶ್ರೀನಿವಾಸ ವಾಡಪ್ಪಿ ಹಾಗೂ 'ಫ.ಗು. ಹಳಕಟ್ಟಿ ಅವರ ಕೊಡುಗೆ' ಕುರಿತು ಬಸವ ಸಮಿತಿ ಅಧ್ಯಕ್ಷ ಅರವಿಂದ ಜತ್ತಿ ಅವರು ಉಪನ್ಯಾಸ ನೀಡಿದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿ ಪ್ರಕಾಶ್ ಮತ್ತಿಹಳ್ಳಿ ಇದ್ದರು.

ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಶೇಷಾದ್ರಿಪುರ ಮಹಾವಿದ್ಯಾಲಯ ಹಾಗೂ ರಾಷ್ಟ್ರೀಯ ಸೇವಾ ಯೋಜನೆ ರಾಜ್ಯಕೋಶದ ಸಹಯೋಗದಲ್ಲಿ ಈ ಕಾರ್ಯಕ್ರಮ ಆಯೋಜಿಸಲಾಗಿತ್ತು.



ಉದಯವಾಣಿ | ಬುಧವಾರ, ಜುಲೈ 13, 2022

# ಕನ್ನಡ ಏಕೀಕರಣಕ್ಕೆ ಆಲೂರು, ಹಳಕಟ್ಟಿ ಕೊಡುಗೆ ಅಪಾರ



ಬೆಂಗಳೂರು: ಆಲೂರು ವೆಂಕಟರಾಯರು ಹಾಗೂ ಫ.ಗು.ಹಳಕಟ್ಟಿ ಸಮಕಾಲೀನರು. ಇಬ್ಬರೂ ಕನ್ನಡ ಏಕೀಕರಣದಲ್ಲಿ ಮಹತ್ವದ ಪಾತ್ರ ನಿರ್ವಹಿಸಿದ್ದಾರೆ ಎಂದು ಕರ್ನಾಟಕ ಗಡಿ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ।ಸಿ.ಸೋಮಶೇಖರ್ ಶ್ಲಾಘಿಸಿದರು.

ಕರ್ನಾಟಕ ಗಡಿಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಮಂಗಳವಾರ ಗಾಂಧಿಭನದಲ್ಲಿ ಹಮ್ಮಿಕೊಂಡಿದ್ದ ಆಲೂರು ವೆಂಕಟರಾಯರ ಮತ್ತು ಡಾ.ಫ.ಗು. ಹಳಕಟ್ಟಿ ಜನ್ಮದಿನಾಚರಣೆಯಲ್ಲಿ ಮಾತನಾಡಿದರು.

ಕನ್ನಡ ವಚನ ಸಾಹಿತ್ಯ ಭದ್ರವಾಗಿ ಉಳಿಯಲು ಫ.ಗು.ಹಳಕಟ್ಟಿ ಕಾರಣರಾಗಿದ್ದಾರೆ. ಸೈಕಲ್ ಮೇಲೆ ತೆರಳಿ ತಾಳೆಗರಿ ಸಂಗ್ರಹಿಸಿ, ತಮ್ಮ ಮನೆ ಮಾರಾಟ ಮಾಡಿ ವಚನ ಸಾಹಿತ್ಯವನ್ನು ಮುದ್ರಣ ಮಾಡಿ ಕನ್ನಡಿಗರಿಗೆ ನೀಡಿದ ಹಿರಿಮೆ ಫ.ಗು.ಹಳಕಟ್ಟಿ ಅವರದ್ದಾಗಿದೆ ಎಂದು ಸ್ಮರಿಸಿದರು.

ಮುಂದಿನ ದಿನಗಳಲ್ಲಿ ಕಸಾಪ ಹಾಗೂ ಗಡಿ ಅಭಿವೃದ್ಧಿ ಪ್ರಾಧಿಕಾರ ಜತೆಯಾಗಿ ಮತ್ತಷ್ಟು ಉತ್ತಮ ಕಾರ್ಯಕ್ರಮಗಳನ್ನು ಯುವ ಸಮೂಹವನ್ನು ಕೇಂದ್ರೀಕರಿಸಿ ರೂಪಿಸಲಿವೆ ಎಂದರು.

- ಸ್ವಂತ ಮನೆ ಮಾರಾಟ ಮಾಡಿ ವಚನ ಸಾಹಿತ್ಯವನ್ನು ಮುದ್ರಣ ಮಾಡಿದ ಫ.ಗು.ಹಳಕಟ್ಟಿ: ಪ್ರಾಧಿಕಾರ ಅಧ್ಯಕ್ಷ ಸೋಮಶೇಖರ್

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಮಹೇಶ ಜೋಶಿ ಮಾತನಾಡಿ, ಕನ್ನಡ ಭಾಷೆ ಪರಿಪೂರ್ಣ ಭಾಷೆಯಾಗಿದ್ದು ಇಂಗ್ಲಿಷ್ ಭಾಷೆ ಮೇಲಿನ ವ್ಯಾಮೋಹ ಬಿಡಬೇಕು ಎಂದರು.

'ಕರ್ನಾಟಕ ಏಕೀಕರಣ ಆಲೂರು ವೆಂಕಟರಾಯರ ಕೊಡುಗೆ' ಕುರಿತು ಸಾಹಿತಿ ಶ್ರೀನಿವಾಸ ವಾಡಪ್ಪಿ ಮತ್ತು 'ವಚನ ಸಾಹಿತ್ಯ ಸಂಶೋಧನೆ ಫ.ಗು. ಹಳಕಟ್ಟಿ ಕೊಡುಗೆ' ಕುರಿತು ಬಸವ ಸಮಿತಿ ಅಧ್ಯಕ್ಷ ಅರವಿಂದ ಜತ್ತಿ ಅವರು ಉಪನ್ಯಾಸ ನೀಡಿದರು.

ಸಂಯುಕ್ತ ಕರ್ನಾಟಕ 13 ಜುಲೈ 2022



ವಿಶ್ವ ಮಾನವ ರಾಷ್ಟ್ರಕವಿ ಕುವೆಂಪು ಕಲಾನಿಕೇತನದ ವತಿಯಿಂದ ಕೆನಡಾ ದೇಶದ ಸಂಸದ ಕನ್ನಡಿಗ ಚಂದ್ರ ಆರ್ಯ ಅವರನ್ನು ಸನ್ಮಾನಿಸಿ ಗೌರವಿಸಲಾಯಿತು. ಈ ಸಂದರ್ಭದಲ್ಲಿ ನಾಡೋಜ ಡಾ. ವೂಡೇ ಪಿ. ಕೃಷ್ಣ, ಕಲಾನಿಕೇತನದ ಅಧ್ಯಕ್ಷ ಕುವೆಂಪು ಪ್ರಕಾಶ್, ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಎ.ಆರ್. ಶ್ರೀನಿವಾಸಯ್ಯ, ಶ್ರೀರಾಮಯ್ಯ ಉಪಸ್ಥಿತರಿದ್ದರು.

ಕನ್ನಡಪ್ರಭ
ಬುಧವಾರ 13.7.2022

ಜಯಂತ್ಯುತ್ಸವ 19 ಗಡಿ ಜಿಲ್ಲೆಗಳಲ್ಲಿ ಏಕೀಕರಣ ಮಹನೀಯರ ಸ್ಮರಣೆ: ಡಾ.ಸಿ.ಸೋಮಶೇಖರ

# ಆಲೂರು ವೆಂಕಟರಾಯರ ಜನ್ಮದಿನಾಚರಣೆ

• ಕನ್ನಡಪ್ರಭ ವಾರ್ತೆ ಬೆಂಗಳೂರು

ಕನ್ನಡ ನಾಡಿನ ಏಕೀಕರಣಕ್ಕೆ ಹೋರಾಡಿದ ಮಹನೀಯರ ಸ್ಮರಣೆ ಕಾರ್ಯಕ್ರಮವನ್ನು 19 ಗಡಿ ಜಿಲ್ಲೆಗಳಲ್ಲಿ ಆಯೋಜಿಸುವುದಾಗಿ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ.ಸಿ.ಸೋಮಶೇಖರ ಹೇಳಿದರು.

ಮಂಗಳವಾರ ಕುಮಾರ ಕೃಪಾ ರಸ್ತೆಯಲ್ಲಿರುವ ಗಾಂಧಿಭವನದಲ್ಲಿ ಗಾಂಧಿ ಸ್ಮಾರಕ ನಿಧಿ, ಶೇಷಾದ್ರಿಪುರಂ ಮಹಾವಿದ್ಯಾಲಯ, ಎನ್‌ಎಸ್‌ಎಸ್ ಸಹಯೋಗದಲ್ಲಿ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಹಮ್ಮಿಕೊಂಡಿದ್ದ ಆಲೂರು ವೆಂಕಟರಾಯರ ಜನ್ಮದಿನಾಚರಣೆ ಮತ್ತು ಡಾ.ಫ.ಗು. ಹಳಕಟ್ಟಿ ಅವರ ದಿವ್ಯಸ್ಮರಣೆ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಅವರು ಮಾತನಾಡಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಸಹಯೋಗದಲ್ಲಿ ಏಕೀಕರಣಕ್ಕೆ ಹೋರಾಡಿದ ಮಹನೀಯರ ಸ್ಮರಣೆ ಕಾರ್ಯಕ್ರಮ ಆಯೋಜಿಸುವುದಾಗಿ ತಿಳಿಸಿದರು.



ನಗರದ ಗಾಂಧಿಭವನದಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಕಸಾಪ ಅಧ್ಯಕ್ಷ ಡಾ.ಮಹೇಶ್ ಜೋಶಿ ಅವರು ಆಲೂರು ವೆಂಕಟರಾಯರು ಮತ್ತು ಫ.ಗು.ಹಳಹಟ್ಟಿ ಅವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದರು.

ಕಾರ್ಯಕ್ರಮ ಉದ್ಘಾಟಿಸಿದ ಕನ್ನಡ ಸಾಹಿತ್ಯ ಪರಿಷತ್ತು ಅಧ್ಯಕ್ಷ ಡಾ.ಮಹೇಶ್ ಜೋಶಿ ಮಾತನಾಡಿ, ಆಲೂರು ವೆಂಕಟರಾಯರು ಮತ್ತು ಫ.ಗು.ಹಳಕಟ್ಟಿ ಅವರು ಕನ್ನಡ ನಾಡು ಕಂಡ ಧೀಮಂತ ವ್ಯಕ್ತಿಗಳು. ನಾಡಿನ ಏಕೀಕರಣದ ಹೋರಾಟದಲ್ಲಿ ಅವರ ಕೊಡುಗೆ ಅಪಾರ. ಈ ಹಿರಿಯರು ಹಾಕಿಕೊಟ್ಟ ಮಾರ್ಗದಲ್ಲಿ ಕನ್ನಡಿಗರ ಮುನ್ನಡೆದು ಮಾತೃಭಾಷೆಯ ಅಭಿವೃದ್ಧಿಗೆ ಶ್ರಮಿಸಬೇಕು ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ, ಸಾಹಿತಿ ಶ್ರೀನಿವಾಸ ವಾಡಪ್ಪಿ, ಬಸವ ಸಮಿತಿ ಅಧ್ಯಕ್ಷ ಅರವಿಂದ ಜತ್ತಿ ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ
13 ಜುಲೈ 2022 ಬುಧವಾರ
ಬೆಂಗಳೂರು (BENGALURU)

# 19 ಗಡಿ ಜಿಲ್ಲೆಗಳಲ್ಲಿ ಮಹನೀಯರ ಸ್ಮರಣೆ

ಸಂ.ಕ.ಸಮಾಚಾರ, ಬೆಂಗಳೂರು.

ರಾಜ್ಯದ ಏಕೀಕರಣಕ್ಕಾಗಿ ಹೋರಾಡಿದ ಮಹನೀಯರ ಸ್ಮರಣೆಯ ಕಾರ್ಯಕ್ರಮಗಳನ್ನು 19 ಗಡಿ ಜಿಲ್ಲೆಗಳಲ್ಲಿ ಆಚರಿಸಲು ಕರ್ನಾಟಕ ಗಡಿ ಪ್ರದೇಶಾಭಿವೃದ್ಧಿ ಪ್ರಾಧಿಕಾರ ನಿರ್ಧರಿಸಿದೆ.

ನಗರದ ಗಾಂಧಿಭವನದಲ್ಲಿ ಮಂಗಳವಾರ ಕಸಾಪ ಮತ್ತು ಗಡಿ ಅಭಿವೃದ್ಧಿ ಪ್ರಾಧಿಕಾರ ಸಂಯುಕ್ತವಾಗಿ ಹಮ್ಮಿಕೊಂಡಿದ್ದ ಆಲೂರು ವೆಂಕಟರಾಯರ ಜನ್ಮದಿನ ಹಾಗೂ ಫ.ಗು.ಹಳಕಟ್ಟಿ ಅವರ ಸ್ಮರಣೆ ಕಾರ್ಯಕ್ರಮವನ್ನು ಉದ್ಘಾಟಿಸಿದ ಗಡಿ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ. ಸಿ.ಸೋಮಶೇಕರ್ ಈ ವಿಷಯ ತಿಳಿಸಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಗಡಿ ಅಭಿವೃದ್ಧಿ ಪ್ರಾಧಿಕಾರ ಸಂಯುಕ್ತವಾಗಿ ಈ ಕಾರ್ಯಕ್ರಮ ನಡೆಸಲಿದೆ ಎಂದರು. ಕನ್ನಡ ಸಾಹಿತ್ಯ ಪರಿಷತ್ತಿನ ರಾಜ್ಯಾಧ್ಯಕ್ಷ ಡಾ. ಮಹೇಶ ಜೋಶಿ ಮಾತನಾಡಿ, ಕನ್ನಡ ಭಾರತ ಮಾತ್ರವಲ್ಲ ಇಡೀ ಜಗತ್ತಿನಲ್ಲಿಯೇ ಸಮೃದ್ಧ ಭಾಷೆ. ಕನ್ನಡಿಗರ ಪ್ರಥಮಾದ್ಯತೆ ಸದಾ ಕಾಲಕ್ಕೂ ಕನ್ನಡವೇ ಆಗಿರಬೇಕೆಂದು ಹೇಳಿದರು.

ಚಿಂತಕ ಶ್ರೀನಿವಾಸ ವಾಡಪ್ಪಿ ಮಾತನಾಡಿ, ಆಲೂರು ವೆಂಕಟರಾಯರು ಕನ್ನಡಕ್ಕಾಗಿ ನೀಡಿರುವ ಕೊಡುಗೆ ಅಪಾರ.



ಗಾಂಧಿಭವನದಲ್ಲಿ ಆಯೋಜಿಸಲಾಗಿದ್ದ ಕಾರ್ಯಕ್ರಮದಲ್ಲಿ ಕಸಾಪ ಅಧ್ಯಕ್ಷ ಡಾ. ಮಹೇಶ್ ಜೋಶಿ ಆಲೂರ ವೆಂಕಟರಾಯರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದರು. ಸಾಹಿತಿ ಶ್ರೀನಿವಾಸ ವಾಡಪ್ಪಿ, ನೇ.ಭ.ರಾಮಲಿಂಗಶೆಟ್ಟಿ, ಬಿ.ಎಮ್. ಪಟೇಲ್‌ಪಾಂಡು ಇದ್ದರು.

ಕರ್ನಾಟಕದ ಏಕೀಕರಣಕ್ಕಾಗಿ ಆಲೂರು ವೆಂಕಟರಾಯರು ನೀಡಿರುವ ಕೊಡುಗೆ ಮತ್ತವರು ಬರೆದಿರುವ ಕನ್ನಡಿಗರ ಕಣ್ಣು ತೆರೆಸಿದ ಕೃತಿಯಾದ ಕರ್ನಾಟಕ ಗತವೈಭವದ ಬಗ್ಗೆ ಮಾಹಿತಿ ನೀಡಿದರು.

ಬಸವ ಸಮಿತಿ ಅಧ್ಯಕ್ಷ ಅರವಿಂದ ಜತ್ತಿ ಮಾತನಾಡಿ, ಬೆಳಗಾವಿಯನ್ನು ಕರ್ನಾಟಕದಿಂದ ಹೊರ ಹಾಕಿದರೆ ಕರ್ನಾಟಕದ ಮುಖ್ಯಮಂತ್ರಿ ಸ್ಥಾನದಿಂದ ನಿರ್ಗಮಿಸುತ್ತೇನೆ ಎಂದು ನೆಹರೂ ರವರಿಗೆ ಕರ್ನಾಟಕದ ಮಾಜಿ ಮುಖ್ಯಮಂತ್ರಿಗಳಾದ ಬಿ.ಡಿ ಜತ್ತಿಯವರು ಹೇಳಿದ ಮಾತನ್ನು ನೆನಪಿಸಿದರು.

ತನ್ನ ತಾನು ಅರಿ ಎಂಬ ಶರಣರ ವಾಣಿಯಂತೆ ತನ್ನೊಳಗಿನ ಅರಿವು ಜಾಗೃತೆಯಾಗಬೇಕು ಎಂಬ ಶರಣರ ವಾಣಿಯನ್ನು ಜಗತ್ತಿಗೆ ತಿಳಿಸಿದ ಮಹಾನುಭಾರು ಫ.ಗು. ಹಳಕಟ್ಟಿಯವರು ಎಂದು ಅರವಿಂದ ಜತ್ತಿ ಹೇಳಿದರು.

ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, ಆಲೂರು ವೆಂಕಟರಾಯರು ಮತ್ತು ಫ.ಗು.ಹಳಕಟ್ಟಿ ಅವರ ಸಾಧನೆಯನ್ನು ನೆನೆದರು. ಗಡಿ ಪ್ರಾಧಿಕಾರ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿ ಪ್ರಕಾಶ್ ಮತ್ತಿಹಳ್ಳಿ ವಂದಿಸಿದರು..

# ಅಂತಾರಾಷ್ಟ್ರೀಯ ವಿಚಾರ ಸಂಕಿರಣ- ಪ್ರಶಸ್ತಿ ಪ್ರದಾನ

ತುಮಕೂರು: ಸದ್ವಿದ್ಯಾ ಫೌಂಡೇಷನ್ ಶೈಕ್ಷಣಿಕ ಆಡಳಿತ ವ್ಯವಸ್ಥೆಯ ಅಡಿಯಲ್ಲಿ ಬರುವ ಡೈಮಂಡ್ ಕಾಲೇಜ್ ಆಫ್ ಮ್ಯಾನೇಜ್ಮೆಂಟ್ ಅಂಡ್ ಸೈನ್ಸ್ ಬೆಂಗಳೂರು ಹಾಗೂ ತುಮಕೂರಿನ ಈಶ್ವೇವು ಪ್ರಕಾಶನದ ಸಹಯೋಗದಲ್ಲಿ ಆಗಸ್ಟ್ 16 ರಂದು ಕನ್ನಡ ಸಾಹಿತ್ಯ ಸಾಮರಸ್ಯ ಮತ್ತು ಬಂಡಾಯ ಎಂಬ ವಿಷಯದ ಮೇಲೆ 4ನೇ ಒಂದು ದಿನದ ಅಂತಾರಾಷ್ಟ್ರೀಯ ವಿಚಾರ ಸಂಕಿರಣವನ್ನು ಕಾಲೇಜಿನ ಸಭಾಂಗಣದಲ್ಲಿ ಆಯೋಜಿಸಲಾಗಿದೆ.

ಈ ವಿಚಾರ ಸಂಕಿರಣದ ಸಾನಿಧ್ಯವನ್ನು ತುಮಕೂರಿನ ರಾಮಕೃಷ್ಣ ವಿವೇಕಾನಂದ ಆಶ್ರಮದ ಅಧ್ಯಕ್ಷ ವೀರೇಶಾನಂದ ಸರಸ್ವತಿ ಸ್ವಾಮೀಜಿ ವಹಿಸುತ್ತಾರೆ. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ತಜ್ಞ, ನಾಡೋಜ ಡಾ.ವೂಡೇ ಪಿ ಕೃಷ್ಣ ಕಾರ್ಯಕ್ರಮ ಉದ್ಘಾಟಿಸುವರು. ಬೆಂಗಳೂರು ಉತ್ತರ ವಿಶ್ವವಿದ್ಯಾಲಯದ ಕುಲಪತಿ ಡಾ.ನಿರಂಜನ ವಾನಳ್ಳಿ ವಿಚಾರ ಸಂಕಿರಣದ ಪ್ರಬಂಧ ಮಂಡನಕಾರರು ಬರೆದ ಕನ್ನಡ ಸಾಹಿತ್ಯ ಸಾಮರಸ್ಯ ಮತ್ತು ಬಂಡಾಯ ಕೃತಿಗಳನ್ನು ಲೋಕಾರ್ಪಣೆ ಮಾಡುವರು. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಪ್ರಾಧ್ಯಾಪಕ ಡಾ.ಡಿ.ಕೆ.ಚಿತ್ತಯ್ಯ ಪೂಜಾರ್ ಕೃತಿ ಕುರಿತು ಮಾತನಾಡುವರು. ಮುಖ್ಯ ಅತಿಥಿಗಳಾಗಿ ಅಮೆರಿಕದ ನ್ಯಾಷವೆಲ್ ಕನ್ನಡ ಕೂಟದ ಅಧ್ಯಕ್ಷ ಡಾ.ಮುತ್ತೂರು ರಾಮಪ್ರಸಾದ್, ರಾಷ್ಟ್ರೀಯ ಮೌಲ್ಯಾಂಕ ಮತ್ತು ಮಾನ್ಯತಾ ಪರಿಷತ್ತಿನ ನಿರ್ದೇಶಕ ಡಾ.ಎಸ್.ಸಿ.ಶರ್ಮ, ಆರ್‌ಎನ್‌ಎಸ್ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲ ಡಾ.ಸುಧೀರ್ ಪೈ ಕೆ.ಎಲ್. ಪಾಲ್ಗೊಳ್ಳುತ್ತಾರೆ. ಈ ಕಾರ್ಯಕ್ರಮದಲ್ಲಿ ಈಶ್ವೇವು ಪ್ರಕಾಶನದ ವತಿಯಿಂದ ಸಂಸ್ಕೃತಿ ಚಿಂತಕ ಡಾ.ಸಿ.ನಾಗಣ್ಣನವರಿಗೆ ಸಾಹಿತ್ಯ ಮತ್ತು ಸಂಸ್ಕೃತಿ ರತ್ನ, ಅನ್ವಯಿಕ ಮನೋವಿಜ್ಞಾನಿ, ಅಂತಾರಾಷ್ಟ್ರೀಯ ವೈದ್ಯಕೀಯ ವಿಜ್ಞಾನ ಮತ್ತು ತಾಂತ್ರಿಕ ವಿಜ್ಞಾನ ಮಂಡಳಿಯ ಸದಸ್ಯ ಪ್ರೊ.ಅನಿಲ್ ಕುಮಾರ್ ಎನ್ ಜೋಶಿ ಅವರಿಗೆ ಶ್ರೇಷ್ಠ ಶಿಕ್ಷಣ ರತ್ನ, ತುಮಕೂರು ವಿಶ್ವವಿದ್ಯಾಲಯದ ನಿವೃತ್ತ ಕುಲಪತಿ ಕರ್ನಲ್ ಪ್ರೊ.ವೈ.ಎಸ್.ಸಿದ್ದೇಗೌಡ ಅವರಿಗೆ ಶ್ರೇಷ್ಠ ಆಡಳಿತ ರತ್ನ, ಖ್ಯಾತ ಅಂಕಣಕಾರರಾದ ಡಾ. ಪ್ರಿಯಾಂಕ ಎಂ.ಜಿ. ಅವರಿಗೆ ಯುವ ಸಾಹಿತ್ಯ ರತ್ನ ಪ್ರಶಸ್ತಿ ನೀಡಲಾಗುತ್ತದೆ. ವಿಚಾರ ಸಂಕಿರಣದ ಪ್ರಧಾನ ಗೋಷ್ಠಿಯಲ್ಲಿ ದಾಸ ಸಾಹಿತ್ಯದಲ್ಲಿ ಬಂಡಾಯ ನೆಲೆಗಳು ಎಂಬ ವಿಷಯದ ಮೇಲೆ ಮದ್ರಾಸ್ ವಿಶ್ವವಿದ್ಯಾಲಯದ ಸಹಾಯಕ ಪ್ರಾಧ್ಯಾಪಕ ಡಾ.ಎಂ.ರಂಗಸ್ವಾಮಿ, ಮಹಿಳಾ ಸಾಹಿತ್ಯದಲ್ಲಿ ಅನನ್ಯತೆ ಎಂಬ ವಿಷಯದ ಮೇಲೆ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಪ್ರಾಧ್ಯಾಪಕ ಡಾ.ಎನ್.ಕೆ.ಲೋಲಾಕ್ಷಿ ಮಾತನಾಡುತ್ತಾರೆ. ಮುಖ್ಯ ಅತಿಥಿಗಳಾಗಿ ಯುವ ಸಂಸ್ಕೃತಿ ಚಿಂತಕರಾದ ಡಾ.ಹೊಂಬಯ್ಯ ಹೊನ್ನಲಗೆರೆ ಮತ್ತು ಡಾ.ಗೀತಾ ವಸಂತ, ಗೋಷ್ಠಿಯ ಅಧ್ಯಕ್ಷರಾಗಿ ಮೈಸೂರಿನ ಮಹಾರಾಜ ಕಾಲೇಜಿನ ಪ್ರಾಧ್ಯಾಪಕ ಡಾ.ಕೆ.ಶಿವಯ್ಯ ಪಾಲ್ಗೊಳ್ಳುವರು. ಪರ್ಯಾಯ ಗೋಷ್ಠಿಯ ಅಧ್ಯಕ್ಷರಾಗಿ ಡಾ.ಸತ್ಯಮಂಗಲ ಮಹಾದೇವ, ಡಾ.ನಾಗರಾಜು, ಡಾ.ಬೈರಪ್ಪ ಕುಪ್ಪಳ್ಳಿ ಮುಂತಾದವರು ಭಾಗವಹಿಸುತ್ತಾರೆ. ಸಮಾರೋಪ ಸಮಾರಂಭದಲ್ಲಿ ಬಿಎಂಶ್ರೀ ಪ್ರತಿಷ್ಠಾನದ ಅಧ್ಯಕ್ಷ ಡಾ.ಬೈರಮಂಗಲ ರಾಮೇಗೌಡ, ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕಿ ಡಾ.ವಿಜಯಕುಮಾರಿ ಕರಿಕಲ್ ಮತ್ತು ಮಹಾರಾಣಿ ಕ್ಲಸ್ಟರ್ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ.ಗೋಮತಿದೇವಿ ಪಾಲ್ಗೊಳ್ಳುತ್ತಾರೆ. ಈ ವಿಚಾರ ಸಂಕಿರಣದಲ್ಲಿ ಭಾಗವಹಿಸುವ ಆಸಕ್ತರು ಸಂಚಾಲಕ ಡಾ.ಡಿ.ಸಿ.ಚಿತ್ರಲಿಂಗಯ್ಯ (9663952748) ಅವರನ್ನು ಸಂಪರ್ಕಿಸಬಹುದು.

ಸಂಜೆವಾಣಿ

ಮಂಗಳವಾರ 12 ಜುಲೈ 2022



ನಗರದ ಗಾಂಧಿಭವನದಲ್ಲಿ ಇಂದು ನಡೆದ ಶ್ರೀ ಆಲೂರು ವೆಂಕಟರಾಯರ ಜನ್ಮದಿನಾಚರಣೆ, ಡಾ. ಶ್ರೀ ಫ.ಗು. ಹಳಕಟ್ಟಿ ಅವರ ದಿವ್ಯಸ್ಮರಣೆ ಸಮಾರಂಭವನ್ನು ಪಕ್ಷದ ಅಧ್ಯಕ್ಷ ನಾಡೋಜ ಡಾ. ಮಹೇಶ್ ಜೋಷಿ ಉದ್ಘಾಟಿಸಿದರು. ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ. ಸಿ. ಸೋಮಶೇಖರ್, ನಾಡೋಜ ವೂಡೆ ಪಿ. ಕೃಷ್ಣ, ಅರವಿಂದ ಜತ್ತಿ ಇದ್ದಾರೆ.

ಕೋಲಾರ ವಾಣಿ
ಜನಪ್ರಿಯ ಪ್ರಾದೇಶಿಕ ಕನ್ನಡ ದಿನಪತ್ರಿಕೆ
KOLARAVANI
Popular Regional Kannada Daily
KV12_07_2022-page-006
12 Jul 2022
For More Updates Visit: www.kolaravani.com Epaper: www.kolaravaniepaper.com

# 'ಬಳ್ಳಾರಿ ಕರ್ನಾಟಕದಲ್ಲೇ ಇರಬೇಕಾದರೆ ಡಾ.ಕೋ.ಚೆನ್ನಬಸಪ್ಪನವರು ಕಾರಣ'

ಬೆಂಗಳೂರು

ನೇರ ನುಡಿ, ನುಡಿದಂತೆ ನಡೆಯುತ್ತ ಅನ್ಯಾಯವನ್ನು ಯಾವ ಭಯವಿಲ್ಲದೆ ಧಾಡ್ಯವಾಗಿ ವಿರೋಧಿಸುವ ಮೇರು ವ್ಯಕ್ತಿತ್ವ ನಾಡೋಜ ಡಾ. ಕೋ.ಚೆನ್ನಬಸಪ್ಪನವರ ಹೋರಾಟ ಇಲ್ಲದಿದ್ದರೆ ಬಳ್ಳಾರಿಯ ನೆಲ ಕರ್ನಾಟಕದಲ್ಲಿ ಇರುತ್ತಿರಲಿಲ್ಲ. ಬಳ್ಳಾರಿ ಆಂಧ್ರದ ಪಾಲಾಗುತ್ತಿತ್ತು ಎಂದು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ನಾಡೋಜ ಡಾ.ಮಹೇಶ ಜೋಶಿ ಹೇಳಿದರು.

ಕನ್ನಡ ಸಾಹಿತ್ಯ ಪರಿಷತ್ತು, •ಕೋಚೆ ಸಾಹಿತ್ಯ ಮತ್ತು ಶಿಕ್ಷಣ ಟ್ರಸ್ಟ್ (ನೋಂ), ಕರ್ನಾಟಕ ಗಾಂಧಿ ಸ್ಮಾರಕ ನಿಧಿ (ನೋಂ) ಹಾಗೂ ಭಾರತೀಯ ವಿದ್ಯಾಭವನ ಇವರುಗಳ ಸಹಭಾಗಿತ್ವದಲ್ಲಿ ಗಾಂಧಿ ಭವನದಲ್ಲಿರುವ ಮಹದೇವ ದೇಸಾಯಿ ಸಭಾಂಗಣದಲ್ಲಿ •ಸ್ವಾತಂತ್ರ್ಯ ಹೋರಾಟಗಾರ ಹಾಗೂ ಹಿರಿಯ ಸಾಹಿತಿ ನಾಡೋಜ ಡಾ. ಕೋ. ಚೆನ್ನಬಸಪ್ಪ ಅವರ ಜನ್ಮಶತಾಬ್ದಿ ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡಿದರು.



ಕೋಚೆ ಅವರು ಅನೇಕ ವಿಶೇಷತೆಗಳ ಸಂಗಮ, ಅವರು ಕರ್ನಾಟಕ ಏಕೀಕರಣದ ರೂವಾರಿ, ಕನ್ನಡದ ಕಟ್ಟಾಳು ಸಾಮಾಜಿಕ ಚಿಂತಕರು ಆದ ಅವರು 80ಕ್ಕೂ ಹೆಚ್ಚು ಕೃತಿಗಳನ್ನು ಸಾರಸ್ವತ ಲೋಕಕ್ಕೆ ನೀಡಿದಾದಾರೆ. ಸಮಾಜದಲ್ಲಿ ತುಳಿತಕ್ಕೆ ಒಳಗಾದವರ, ನೊಂದವರ, ರೈತರ ಪರ ಧ್ವನಿಯಾಗಿದ್ದವರು, ಸಾಮಾಜಿಕ ಸಮಸ್ಯೆಗಳ ವಕೀಲರಾಗಿದ್ದರು ಎಂದು ಬಹುಮುಖಿ ಪ್ರತಿಭೆಯ ಕೋ. ಚೆನ್ನಬಸಪ್ಪ ಅವರ ನಿಲುವುಗಳನ್ನು ನಾಡೋಜ ಡಾ. ಮಹೇಶ ಜೋಶಿ ನೆನಪಿಸಿಕೊಂಡರು.

ಕೋಚೆ ಅವರ ಜನ್ಮಶತಾಬ್ದಿ ಸಮಾಮಾರಂಭವನ್ನು ಉದ್ಘಾಟಿಸಿದ ಭಾರತದ ಸರ್ವೋಚ್ಚ ನ್ಯಾಯಾಲಯದ ವಿಶ್ರಾಂತ ನ್ಯಾಯಮೂರ್ತಿಗಳಾದ ಶಿವರಾಜ ವಿ.ಪಾಟೀಲ್ ಅವರು ಮಾತನಾಡಿ ಕನ್ನಡ ಸಾಹಿತ್ಯ ಪರಿಷತ್ತು ಇತ್ತೀಚೆಗೆ ರಚನಾತ್ಮಕ ಕೆಲಸಗಳನ್ನು ಮಾಡುತ್ತಿದೆ. ಅದಕ್ಕೆ ಸಾಕ್ಷಿ ಇವತ್ತಿನ ಕೋಚೆ ಅವರ ಜನ್ಮಶತಾಬ್ದಿ ಕಾರ್ಯಕ್ರಮವೂ ಒಂದು. ಕೋಚೆ ಅವರು ಪ್ರಜ್ಞಾವಂತಿಕೆಯ ನ್ಯಾಯಯುತ ವ್ಯಕ್ತಿತ್ವದ ವಿದ್ವಾಂಸ. ಸಾಹಿತ್ಯಕ್ಷೇತ್ರದ ಆಸ್ತಿ, ಯಾರವೇ ಹಂಗಿಲ್ಲದೆ, ಹಮ್ಮಿಲ್ಲದೆ ಕನ್ನಡಕ್ಕಾಗಿ ಬದುಕಿದವರು ಎಂದು ಕೋಚೆ ಅವರ ಬಗ್ಗೆ ನೆನಪಿಸಿಕೊಂಡರು.

ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಯಾದ ಶ್ರೀ ನೇ.ಭ. ರಾಮಲಿಂಗಶೆಟ್ಟಿ ಸ್ವಾಗತಿಸಿದರು, ಕನ್ನಡ ಸಾಹಿತ್ಯ ಪರಿಷತ್ತಿನ ಗೌರವಕೋಶಾಧ್ಯಕ್ಷ ಶಿ ಬಿ.ಎಂ.ಪಟೇಲ್‌ಪಾಂಡು ಅವರು ಕಾರ್ಯಕ್ರಮ ನಿರೂಪಿಸಿದರು.

ಸಂಜೆ ವಾಣಿ                Monday 11 July 2022

# ಬಳ್ಳಾರಿಗಾಗಿ ಕೋ.ಚೆ ಹೋರಾಟ ಸ್ಮರಣೆ



ಕನ್ನಡ ಸಾಹಿತ್ಯ ಪರಿಷತ್ ಗಾಂಧಿಭವನದಲ್ಲಿ ಹಮ್ಮಿಕೊಂಡಿದ್ದ ನಾಡೋಜ ಡಾ. ಕೋ. ಚನ್ನಬಸಪ್ಪನವರ ಜನ್ಮಶತಾಬ್ದಿ ಸಮಾರಂಭವನ್ನು ನಾಡೋಜ ಡಾ. ವೂಡೇ ಪಿ. ಕೃಷ್ಣ ಉದ್ಘಾಟಿಸಿದರು. ಕಸಾಪ ಅಧ್ಯಕ್ಷ ನಾಡೋಜ ಡಾ. ಮಹೇಶ್ ಜೋಶಿ, ಸುಪ್ರೀಂ ಕೋರ್ಟ್‌ನ ನಿವೃತ್ತ ನ್ಯಾ. ಶಿವರಾಜ ವಿ. ಪಾಟೀಲ್, ಕೃಷಿ ಇಲಾಖೆಯ ಕಾರ್ಯದರ್ಶಿ ಶಿವಯೋಗಿ ಕಳಸದ, ಕಸಾಪ ಗೌರವ ಕೋಶಾಧ್ಯಕ್ಷ ಬಿ.ಎಂ. ಪಟೇಲ್ ಪಾಂಡು ಇದ್ದಾರೆ.

ಬೆಂಗಳೂರು, ಜು. 11– ನೇರ ನುಡಿ, ನುಡಿದಂತೆ ನಡೆಯುತ್ತ ಅನ್ಯಾಯವನ್ನುಯಾವಭಯವಿಲ್ಲದೆ ಧಾಡ್ಯವಾಗಿ ವಿರೋಧಿಸುವ ಮೇರು ವ್ಯಕ್ತಿತ್ವ ನಾಡೋಜ ಡಾ. ಕೋ. ಚೆನ್ನಬಸಪ್ಪನವರ ಹೋರಾಟ ಇಲ್ಲದಿದ್ದರೆ ಬಳ್ಳಾರಿಯ ನೆಲ ಕರ್ನಾಟಕದಲ್ಲಿ ಇರುತ್ತಿರಲಿಲ್ಲ. ಬಳ್ಳಾರಿ ಆಂಧ್ರದ ಪಾಲಾಗುತ್ತಿತ್ತು ಎಂದು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ನಾಡೋಜ ಡಾ.ಮಹೇಶ ಜೋಶಿ ಅಭಿಪ್ರಾಯಪಟ್ಟರು.

ಕನ್ನಡ ಸಾಹಿತ್ಯ ಪರಿಷತ್ತು, *ಕೋಚೆ ಸಾಹಿತ್ಯ ಮತ್ತು ಶಿಕ್ಷಣ ಟ್ರಸ್ಟ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಭಾರತೀಯ ವಿದ್ಯಾಭವನ ಇವರುಗಳ ಸಂಯುಕ್ತಾಶ್ರಯದಲ್ಲಿ ಗಾಂಧಿ ಭವನದಲ್ಲಿ ಏರ್ಪಡಿಸಿದ್ದ *ಸ್ವಾತಂತ್ರ್ಯ ಹೋರಾಟಗಾರಹಾಗೂ ಹಿರಿಯ ಸಾಹಿತಿ ನಾಡೋಜ ಡಾ. ಕೋ.ಚೆನ್ನಬಸಪ್ಪಅವರಜನ್ಮಶತಾಬ್ದಿ ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡಿದ ಅವರು, ಕೋಚೆ ಅವರು ಅನೇಕ ವಿಶೇಷತೆಗಳ ಸಂಗಮ. ಅವರು ಕರ್ನಾಟಕ ಏಕೀಕರಣದ ರೂವಾರಿ, ಕನ್ನಡದ ಕಟ್ಟಾಳು ಸಾಮಾಜಿಕ ಚಿಂತಕರು ಆದ ಅವರು 80ಕ್ಕೂ ಹೆಚ್ಚು ಕೃತಿಗಳನ್ನು ಸಾರಸ್ವತ ಲೋಕಕ್ಕೆ ನೀಡಿದ್ದಾರೆ.

ಸಮಾಜದಲ್ಲಿತುಳಿತಕ್ಕೆಒಳಗಾದವರ, ನೊಂದವರ, ರೈತರ ಪರ ಧ್ವನಿಯಾಗಿದ್ದವರು, ಸಾಮಾಜಿಕ ಸಮಸ್ಯೆಗಳ ವಕೀಲರಾಗಿದ್ದರು ಎಂದು ನೆನಪಿಸಿಕೊಂಡರು.

ಕಾರ್ಯಕ್ರಮಉದ್ಘಾಟಿಸಿಮಾತನಾಡಿದ ವಿಶ್ರಾಂತ ನ್ಯಾಯಮೂರ್ತಿಗಳಾದ ಶಿವರಾಜ ವಿ. ಪಾಟೀಲ್ ಕನ್ನಡ ಸಾಹಿತ್ಯಪರಿಷತ್ತುಇತ್ತೀಚೆಗೆರಚನಾತ್ಮಕ ಕೆಲಸಗಳನ್ನು ಮಾಡುತ್ತಿದೆ. ಅದಕ್ಕೆ ಸಾಕ್ಷಿ ಇವತ್ತಿನ ಕೋಚೆ ಅವರ ಜನ್ಮಶತಾಬ್ದಿ ಕಾರ್ಯಕ್ರಮವೂಒಂದು. ಕೋಚೆ ಅವರು ಪ್ರಜ್ಞಾವಂತಿಕೆಯ ನ್ಯಾಯಯುತ ವ್ಯಕ್ತಿತ್ವದ ವಿದ್ವಾಂಸ. ಸಾಹಿತ್ಯಕ್ಷೇತ್ರದ ಆಸ್ತಿ, ಯಾರದೇ ಹಂಗಿಲ್ಲದೆ, ಹಮ್ಮಿಲ್ಲದೆ ಕನ್ನಡಕ್ಕಾಗಿ ಬದುಕಿದವರು ಎಂದು ಕೋಚೆ ಅವರ ಬಗ್ಗೆ ನೆನಪಿಸಿಕೊಂಡರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ *ನಾಡೋಜ ಡಾ. ವೂಡೇ ಪಿ. ಕೃಷ್ಣ ಅವರು ಮಾತನಾಡಿ ಗಾಂಧಿಯವರನಡೆನುಡಿವಿಚಾರಗಳನ್ನು ಯಾರು ಒಪ್ಪಿಕೊಳ್ಳುತ್ತಾರೋ, ಅನ್ಯಾಯ ವಿರೋಧಿಸುತ್ತಾರೋ ಅವರೇ ಗಾಂಧಿವಾದಿಗಳು. ಖಾದಿ ತೊಟ್ಟ ಮಾತ್ರಕ್ಕೆ ಗಾಂಧಿವಾದಿ ಆಗಲಾರರು. ಕೋಚೆ ಅವರು ಅನ್ಯಾಯವನ್ನು ತಕ್ಷಣವೇ ವಿರೋಧಿಸುವ ಮಹಾನ್ ಗಾಂಧಿವಾದಿಗಳಾಗಿದ್ದರು ಎಂದರು.

ಕೃಷಿ ಇಲಾಖೆಯ ಕಾರ್ಯದರ್ಶಿ *ಶ್ರೀ ಶಿವಯೋಗಿ ಕಳಸದ ಮಾತನಾಡಿ ಕೋ. ಚೆನ್ನಬಸಪ್ಪರವರ ಸರಳ ಜೀವನ ಮತ್ತು ಸಾಮಾನ್ಯ ಬದುಕಿನ ಅನಾವರಣ ಮಾಡಿದರು. ಕೋಚೆ ಅವರ ಮಗ ಹಾಗೂ ಮೇರಿಲ್ಯಾಂಡ್ ಯೂನಿವರ್ಸಿಟಿಯ ಡೀನ್ ಆದ ಡಾ. ಪ್ರಭುದೇವ ಕೋಣನ ಮಾತನಾಡಿ ನಾನು ಕೋಚೆಯವರ ಮಗ ಎನ್ನುವುದಕ್ಕೆ ಅಭಿಮಾನವಾಗುತ್ತದೆ. ಕೆಲವು ವಿಷಯಗಳಲ್ಲಿ ಯಾವತ್ತೂ ರಾಜಿ ಮಾಡಿಕೊಳ್ಳದ ಅವರು ವಾದಕ್ಕೆ ನಿಂತ ಉದಾಹರಣೆಗಳನ್ನು ನೆನಪಿಸಿಕೊಂಡರು.

ಆಕಾಶವಾಣಿಯ ವಿಶ್ರಾಂತ ನಿರ್ದೇಶಕರಾದ ಡಾ. ಬಸವರಾಜ ಸಾದರ ಕೋಚೆ ಮತ್ತು ಪ್ರಗತಿಶೀಲ ಸಾಹಿತ್ಯ ಚಳವಳಿ ಕುರಿತು ಹಾಗೂ ಹಿರಿಯ ಸಾಹಿತಿ ಪ್ರೊ. ಕೆ.ಎಸ್. ಮಧುಸೂಧನ ಅವರು ಕೋಚೆ ಅವರ ಅರವಿಂದ ಸಾಹಿತ್ಯ ಅನುವಾದಗಳು ವಿಷಯದ ಕುರಿತು ಉಪನ್ಯಾಸ ಮಾಡಿದರು.

ವಿಚಾರಗೋಷ್ಠಿಯ ಅಧ್ಯಕ್ಷತೆಯನ್ನು ಹಿರಿಯ ಪತ್ರಕರ್ತರಾದ ಶ್ರೀ ಲಕ್ಷ್ಮಣ ಕೊಡಸೆ ವಹಿಸಿಕೊಂಡಿದ್ದರು. ಹಿರಿಯ ಸಂಶೋಧಕರಾದ ಡಾ. ವೀರಶೆಟ್ಟಿ ಬಿ. ಗಾರಂಪಳ್ಳಿ, ಸಾಹಿತಿಗಳಾದ ಶ್ರೀ ಪ್ರಕಾಶ ಗಿರಿಮಲ್ಲನವರ, ಕೋಚೆ ಅವರ ಪುತ್ರಿ ಶಾಂತ ಜಯಪ್ರಸಾದ್, ರಾಮಯ್ಯ ಮೆಮೋರಿಯಲ್ ಆಸ್ಪತ್ರೆಯ ಅಧ್ಯಕ್ಷ ಡಾ. ಕೆ.ಸಿ. ಗುರುದೇವ್, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಜಂಟಿ ನಿರ್ದೇಶಕರಾದ ಶ್ರೀ ಕೆ.ಬಿ. ಗುದಗಿ ಅವರುಗಳು ಕೋಚೆಯವರೊಂದಿಗಿನ ಒಡನಾಟವನ್ನು ಹಂಚಿಕೊಂಡರು.

ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿ ಶ್ರೀ ನೇ.ಭ. ರಾಮಲಿಂಗಶೆಟ್ಟಿ ಸ್ವಾಗತಿಸಿದರು, ಕನ್ನಡ ಸಾಹಿತ್ಯ ಪರಿಷತ್ತಿನ ಗೌರವಕೋಶಾಧ್ಯಕ್ಷ ಶ್ರೀ ಬಿ.ಎಂ.ಪಟೇಲ್ ಪಾಂಡು ಅವರು ಕಾರ್ಯಕ್ರಮ ನಿರೂಪಿಸಿದರು.

VIJAYAVANI BENGALURU

4B c ಸೋಮವಾರ 11 ಜುಲೈ 2022
11 JULY 2022

## ನ್ಯಾ. ಶಿವರಾಜ ಪಾಟೀಲ್ ಅಭಿಮತ ಕೋ.ಚೆನ್ನಬಸಪ್ಪ ಜನ್ಮಶತಮಾನೋತ್ಸವ

# ಸಾಹಿತ್ಯಕ್ಕೆ ಆಸ್ತಿ, ಅಧಿಕಾರಗಳ ಹಂಗಿಲ್ಲ

ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಸಾಹಿತ್ಯಕ್ಕೆ ಆಸ್ತಿ, ಅಧಿಕಾರ ಮತ್ತು ಅಂತಸ್ತಿನ ಹಂಗಿಲ್ಲ ಎಂದು ಸುಪ್ರೀಂಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ ಶಿವರಾಜ ವಿ. ಪಾಟೀಲ್ ಹೇಳಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತು, ಕೋಚೆ ಸಾಹಿತ್ಯ ಮತ್ತು ಶಿಕ್ಷಣ ಟ್ರಸ್ಟ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಭಾರತೀಯ ವಿದ್ಯಾಭವನ ಸಹಯೋಗದಲ್ಲಿ ಗಾಂಧಿಭವನದಲ್ಲಿ ಭಾನುವಾರ ಆಯೋಜಿಸಲಾಗಿದ್ದ ಸ್ವಾತಂತ್ರ್ಯ ಹೋರಾಟಗಾರ ಮತ್ತು ಸಾಹಿತಿ ಡಾ.ಕೋ. ಚೆನ್ನಬಸಪ್ಪ ಶತಮಾನೋತ್ಸವ ಸಮಾರಂಭ ಉದ್ಘಾಟಿಸಿ ಮಾತನಾಡಿದರು.

ಕೋ. ಚೆನ್ನಬಸಪ್ಪ ಅವರು ರಾಮಕೃಷ್ಣ ಪರಮಹಂಸ, ವಿವೇಕಾನಂದ, ಅರವಿಂದ ಹಾಗೂ ಶರಣರ ವಿಚಾರಗಳಿಂದ ಪ್ರಭಾವಿತರಾಗಿದ್ದರು ಎಂಬುದು ಅವರ ನಡೆ, ನುಡಿ ಮತ್ತು ಬರವಣಿಗೆಯಲ್ಲಿ ಕಾಣಿಸುತ್ತಿತ್ತು. ಅವರ ಆದರ್ಶಗಳನ್ನು ಅಳವಡಿಸಿಕೊಂಡು ಜೀವನ ನಡೆಸಿದ್ದರು. ನ್ಯಾಯವಾದಿಯಾಗಿ ಮತ್ತು ನ್ಯಾಯಮೂರ್ತಿಗಳಾಗಿ ಅವರ ಕಾರ್ಯವೈಖರಿಯನ್ನು ನೋಡಿದ್ದೇನೆ. ಯಾವಾಗಲೂ ದಿಟ್ಟ ನಿರ್ಧಾರ ಮತ್ತು ಗಟ್ಟಿ ಧ್ವನಿಯಿಂದ ಗಮನ ಸೆಳೆದಿದ್ದರು. ಪ್ರಜ್ಞಾವಂತ ಮತ್ತು ಚಿಂತನಶೀಲ ವ್ಯಕ್ತಿತ್ವ ಹೊಂದಿದ್ದರು ಎಂದು ಸ್ಮರಿಸಿದರು.



ವಿಜಯವಾಣಿ

ಗಾಂಧಿಭವನದಲ್ಲಿ ಆಯೋಜಿಸಿದ್ದ ಡಾ. ಕೋ. ಚೆನ್ನಬಸಪ್ಪ ಜನ್ಮಶತ ಮಾನೋತ್ಸವದಲ್ಲಿ ನಿವೃತ್ತ ನ್ಯಾಯಮೂರ್ತಿ ಶಿವರಾಜ ಪಾಟೀಲ್ ಅವರು ಕೋಚೆ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದರು. ಕಸಾಪ ಅಧ್ಯಕ್ಷ ಡಾ. ಮಹೇಶ ಜೋಶಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಕೋಚೆ ಪುತ್ರ ಡಾ. ಪ್ರಭುಲಿಂಗ ಕೋಣನ ಇತರರಿದ್ದರು.

**ಬಳ್ಳಾರಿ ರಾಜ್ಯದಲ್ಲಿರಲು ಕೋಚೆ ಕಾರಣ:** ಬಳ್ಳಾರಿ ಇಂದು ಕರ್ನಾಟಕದಲ್ಲಿದೆ ಎಂದರೆ, ಅದಕ್ಕೆ ಚೆನ್ನಬಸಪ್ಪ ಅವರ ಹೋರಾಟವೇ ಕಾರಣ. ಏಕೀಕರಣದ ವೇಳೆ ಹೋರಾಟ ಮಾಡದಿದ್ದರೆ, ರಾಜ್ಯದ ಗಡಿ ಜಿಲ್ಲೆ ಆಂಧ್ರದ ಪಾಲಾಗುತ್ತಿತ್ತು ಎಂದು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ನಾಡೋಜ ಡಾ. ಮಹೇಶ ಜೋಶಿ ಹೇಳಿದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಕೋಚೆ ಅವರ ಪುತ್ರ ಹಾಗೂ ಅಮೆರಿಕದ ಮೇರಿಲ್ಯಾಂಡ್ ವಿವಿ ಡೀನ್ ಡಾ. ಪ್ರಭುಲಿಂಗ ಕೋಣನ, ಕೃಷಿ ಇಲಾಖೆ ಕಾರ್ಯದರ್ಶಿ ಶಿವಯೋಗಿ ಕಳಸದ, ಕಸಾಪ ಗೌರವ ಕೋಶಾಧ್ಯಕ್ಷ ಬಿ.ಎಂ. ಪಟೇಲ್‌ಪಾಂಡು ಹಾಗೂ ಗೌರವ ಕಾರ್ಯದರ್ಶಿ ನೇ.ಭ. ರಾಮಲಿಂಗಶೆಟ್ಟಿ ಮತ್ತಿತರರು ಉಪಸ್ಥಿತರಿದ್ದರು.

# ಬಳ್ಳಾರಿ ಕರ್ನಾಟಕದಲ್ಲಿ ಉಳಿಯಲು ಡಾ.ಕೋ.ಚೆನ್ನಬಸಪ್ಪ ಕಾರಣ

## ಕಸಾಪ ಅಧ್ಯಕ್ಷ ಡಾ.ಮಹೇಶ್ ಜೋಶಿ । ಡಾ.ಕೋ.ಚೆ. ಜನ್ಮಶತಾಬ್ದಿ ಕಾರ್ಯಕ್ರಮ

**ಬೆಂಗಳೂರು:** ಮೇರು ವ್ಯಕ್ತಿತ್ವದ ನಾಡೋಜ ಡಾ.ಕೋ.ಚೆನ್ನಬಸಪ್ಪ ಅವರ ಹೋರಾಟ ಇಲ್ಲದಿದ್ದರೆ ಬಳ್ಳಿಯ ನೆಲ ಇಂದು ಕರ್ನಾಟದಲ್ಲಿರದೆ ಆಂಧ್ರಪ್ರದೇಶದ ಪಾಲಾಗುತ್ತಿತ್ತು ಎಂದು ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ನಾಡೋಜ ಡಾ.ಮಹೇಶ್ ಜೋಶಿ ಹೇಳಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತು, ಕೋಚೆ ಸಾಹಿತ್ಯ ಮತ್ತು ಶಿಕ್ಷಣ ಟ್ರಸ್ಟ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಭಾರತೀಯ ವಿದ್ಯಾಭವನದ ಸಹಭಾಗಿತ್ವದಲ್ಲಿ ಗಾಂಧಿ ಭವನದ ಮಹದೇವ ದೇಸಾಯಿ ಸಭಾಂಗಣದಲ್ಲಿ ಹಮ್ಮಿಕೊಂಡಿದ್ದ ಸ್ವಾತಂತ್ರ್ಯ ಹೋರಾಟಗಾರ ಹಾಗೂ ಹಿರಿಯ ಸಾಹಿತಿ ನಾಡೋಜ ಡಾ.ಕೋ.ಚೆನ್ನಬಸಪ್ಪ ಅವರ ಜನ್ಮಶತಾಬ್ದಿ ಸಮಾರಂಭದ ಅಧ್ಯಕ್ಷತೆ ವಹಿಸಿ ಅವರು ಮಾತನಾಡಿದರು.

ನೇರ ನುಡಿ, ನುಡಿದಂತೆ ನಡೆಯುತ್ತಾ ಅನ್ಯಾಯವನ್ನು ಯಾವುದೇ ಭಯವಿಲ್ಲದೆ ಎದುರಿಸುತ್ತಿದ್ದ ಕೋಚೆ ಅವರು ಅನೇಕ ವಿಶೇಷತೆಗಳ ಸಂಗಮ. ಅವರು ಕರ್ನಾಟಕ ಏಕೀಕರಣದ ರೂವಾರಿ. ಕನ್ನಡದ ಕಟ್ಟಾಳು, ಸಾಮಾಜಿಕ ಚಿಂತಕರು ಆದ ಅವರು 80ಕ್ಕೂ ಹೆಚ್ಚು ಕೃತಿಗಳನ್ನು ಸಾರಸ್ವತ ಲೋಕಕ್ಕೆ ನೀಡಿದ್ದಾರೆ.



ನಾಡೋಜ ಡಾ.ಕೋ.ಚೆನ್ನಬಸಪ್ಪ ಅವರ ಜನ್ಮಶತಾಬ್ದಿ ಸಮಾರಂಭದ ಉದ್ಘಾಟನೆ ವೇಳೆ ಕಸಾಪ ಅಧ್ಯಕ್ಷ ಡಾ.ಮಹೇಶ್ ಜೋಶಿ, ಸುಪ್ರೀಂ ಕೋರ್ಟ್ ನಿವೃತ್ತ ನ್ಯಾಯಮೂರ್ತಿ ಶಿವರಾಜ ವಿ.ಪಾಟೀಲ್, ನಾಡೋಜ ಡಾ.ವೂಡೆ ಪಿ.ಕೃಷ್ಣ, ಶಿವಯೋಗಿ ಕಳಸದ ಮತ್ತಿತರರು ಇದ್ದರು.

ಸಮಾಜದಲ್ಲಿ ತುಳಿತಕ್ಕೆ ಒಳಗಾದವರ, ನೊಂದವರ, ರೈತರ ಪರ ಧ್ವನಿಯಾಗಿದ್ದವರು. ಸಾಮಾಜಿಕ ಸಮಸ್ಯೆಗಳ ವಕೀಲರಾಗಿದ್ದರು ಎಂದು ಸ್ಮರಿಸಿದರು.

ಕಾರ್ಯಕ್ರಮ ಉದ್ಘಾಟಿಸಿದ ಸುಪ್ರೀಂ ಕೋರ್ಟ್ ವಿಶ್ರಾಂತ ನ್ಯಾಯಮೂರ್ತಿ ಶಿವರಾಜ್ ವಿ. ಪಾಟೀಲ್ ಮಾತನಾಡಿ, ಕನ್ನಡ ಸಾಹಿತ್ಯ ಪರಿಷತ್ತು ಇತ್ತೀಚೆಗೆ ರಚನಾತ್ಮಕ ಕೆಲಸಗಳನ್ನು ಮಾಡುತ್ತಿದೆ. ಅದಕ್ಕೆ ಸಾಕ್ಷಿ ಇವತ್ತಿನ ಕೋಚೆ ಅವರ ಜನ್ಮಶತಾಬ್ದಿ ಕಾರ್ಯಕ್ರಮವೂ ಒಂದು. ಕೋಚೆ ಅವರು ಪ್ರಜ್ಞಾವಂತಿಕೆಯ ನ್ಯಾಯಯುತ ವ್ಯಕ್ತಿತ್ವದ ವಿದ್ವಾಂಸ. ಸಾಹಿತ್ಯಕ್ಷೇತ್ರದ ಆಸ್ತಿ, ಯಾರದೇ ಹಂಗಿಲ್ಲದೆ, ಹಮ್ಮಿಲ್ಲದೆ ಕನ್ನಡಕ್ಕಾಗಿ ಬದುಕಿದವರು ಎಂದು ಕೋಚೆ ಅವರ ಬಗ್ಗೆ ನೆನಪಿಸಿಕೊಂಡರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ ಮಾತನಾಡಿ ಗಾಂಧಿಯವರ ನಡೆ ನುಡಿ ವಿಚಾರಗಳನ್ನು ಯಾರು ಒಪ್ಪಿಕೊಳ್ಳುತ್ತಾರೋ, ಅನ್ಯಾಯ ವಿರೋಧಿಸ್ತಾರೋ ಅವರೇ ಗಾಂಧೀವಾದಿಗಳು. ಖಾದಿ ತೊಟ್ಟ ಮಾತ್ರಕ್ಕೆ ಗಾಂಧೀವಾದಿ ಆಗಲಾರರು. ಕೋಚೆ ಅವರು ಅನ್ಯಾಯವನ್ನು ತಕ್ಷಣವೇ ವಿರೋಧಿಸುವ ಮಹಾನ್ ಗಾಂಧೀವಾದಿಯಾಗಿದ್ದರು ಎಂದು ಬಣ್ಣಿಸಿದರು.

ಕೃಷಿ ಇಲಾಖೆ ಕಾರ್ಯದರ್ಶಿ ಶಿವಯೋಗಿ ಕಳಸದ, ಆಕಾಶವಾಣಿಯ ವಿಶ್ರಾಂತ ನಿರ್ದೇಶಕ ಡಾ. ಬಸವರಾಜ ಸಾದರ, ಹಿರಿಯ ಸಂಶೋಧಕ ಡಾ. ವೀರಶೆಟ್ಟಿ ಬಿ. ಗಾರಂಪಳ್ಳಿ, ಸಾಹಿತಿ ಪ್ರಕಾಶ ಗಿರಿಮಲ್ಲನವರ, ಕೋಚೆ ಅವರ ಪುತ್ರಿ ಶಾಂತ ಜಯಪ್ರಸಾದ್, ರಾಮಯ್ಯ ಮೆಮೋರಿಯಲ್ ಆಸ್ಪತ್ರೆಯ ಅಧ್ಯಕ್ಷ ಡಾ. ಕೆ.ಸಿ. ಗುರುದೇವ್, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಜಂಟಿ ನಿರ್ದೇಶಕ ಕೆ.ಬಿ.ಗುದಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿ ನೇ.ಭ. ರಾಮಲಿಂಗಶೆಟ್ಟಿ, ಗೌರವ ಕೋಶಾಧ್ಯಕ್ಷ ಬಿ.ಎಂ.ಪಟೇಲ್‌ಪಾಂಡು ಇದ್ದರು.

ಉದಯವಾಣಿ ಸೋಮವಾರ, ಜುಲೈ 11, 2022

# ಕೋಚೆ ಮೇಲೆ ವಿವೇಕರ, ಅರವಿಂದರ ಪ್ರಭಾವ ಅಧಿಕ



ಬೆಂಗಳೂರು: ಸಮಾಜ ಸುಧಾರಕರಾದ ಅರವಿಂದ, ಶರಣರು, ಪರಮಹಂಸರು ಮತ್ತು ವಿವೇಕಾನಂದರ ವಿಚಾರಗಳಿಂದ ಡಾ. ಕೋ. ಚೆನ್ನಬಸಪ್ಪ ಪ್ರಭಾವಿತರಾಗಿದ್ದರು ಎಂಬುದು ಅವರ ನಡೆ, ನುಡಿ ಮತ್ತು ಬರವಣಿಗೆಯಲ್ಲಿ ಕಾಣಿಸುತ್ತಿತ್ತು. ಅವರ ಆದರ್ಶಗಳನ್ನು ಅಳವಡಿಸಿಕೊಂಡು ಜೀವನ ನಡೆಸಿದ್ದರು ಎಂದು ಸುಪ್ರೀಂಕೋರ್ಟ್ ನಿವೃತ್ತ ನ್ಯಾ. ಶಿವರಾಜ ಪಾಟೀಲ್ ಅಭಿಪ್ರಾಯ ವ್ಯಕ್ತಪಡಿಸಿದರು.

ಕಸಾಪ, ಕೋಚೆ ಸಾಹಿತ್ಯ ಮತ್ತು ಶಿಕ್ಷಣ ಟ್ರಸ್ಟ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಭಾರತೀಯ ವಿದ್ಯಾಭವನ ಸಹ ಯೋಗದಲ್ಲಿ ಗಾಂಧಿಭವನದಲ್ಲಿ ಭಾನುವಾರ ಹಮ್ಮಿಕೊಂಡಿದ್ದ 'ಸ್ವಾತಂತ್ರ್ಯ ಹೋರಾಟಗಾರರೂ ಆಗಿರುವ ಹಿರಿಯ ಸಾಹಿತಿ ನಾಡೋಜ ಡಾ. ಕೋ. ಚೆನ್ನಬಸಪ್ಪನವರ ಜನ್ಮಶತಾಬ್ದಿ' ಸಮಾರಂಭ ಉದ್ಘಾಟಿಸಿ ಮಾತನಾಡಿದರು. ಯಾವುದೇ ಸಾಹಿತ್ಯಕ್ಕೆ ಆಸ್ತಿ, ಅಧಿಕಾರ ಮತ್ತು ಅಂತಸ್ತಿನ ಹಂಗಿಲ್ಲ. ಬದುಕು ಮತ್ತು ನಿಸರ್ಗವನ್ನು ಹೃದಯದಾಳದಿಂದ ನೋಡುವ ಹಾಗೂ ಸಮಾಜ, ದೇಶದ ಬಗ್ಗೆ ಕಾಳಜಿ ವಹಿಸುವ ಮನಸ್ಸಿರಬೇಕು. ಇಂತಹ ಮನಸ್ಸು ಕೋಚೆ ಅವರಲ್ಲಿತ್ತು. ನ್ಯಾಯವಾದಿಯಾಗಿ ಮತ್ತು ನ್ಯಾಯಮೂರ್ತಿಗಳಾಗಿ ಕೋ.ಚೆ ಅವರನ್ನು ನೋಡಿದ್ದೇನೆ. ಅವರದ್ದು ಯಾವಾಗಲೂ ದಿಟ್ಟ ನಿರ್ಧಾರ ಮತ್ತು ಗಟ್ಟಿ ದನಿ; ಬಹುಮುಖಿ ವ್ಯಕ್ತಿತ್ವವಾಗಿತ್ತು ಎಂದು ಬಣ್ಣಿಸಿದರು.

ಕಸಾಪ ಅಧ್ಯಕ್ಷ ಡಾ. ಮಹೇಶ್ ಜೋಶಿ ಮಾತನಾಡಿ, ಬಳ್ಳಾರಿ ಇಂದು ರಾಜ್ಯದಲ್ಲಿದೆ ಎಂದರೆ, ಅದಕ್ಕೆ ಕೋಚೆ ಅವರ ಹೋರಾಟ ಕಾರಣ. ಏಕೀಕರಣದ ಹೋರಾಟ ಮಾಡದಿದ್ದರೆ, ರಾಜ್ಯದ ಗಡಿ ಜಿಲ್ಲೆ ಆಂಧ್ರದ ಪಾಲಾಗುತ್ತಿತ್ತು ಎಂದು ಸ್ಮರಿಸಿದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ. ಪಿ. ಕೃಷ್ಣ, ಕೋಚೆ ಅವರ ಮಗನಾಗಿರುವ ಅಮೆರಿಕದ ಮೇರಿಲ್ಯಾಂಡ್ ವಿವಿ ಡೀನ್ ಡಾ. ಪ್ರಭುಲಿಂಗ ಕೋಣನ, ಕೃಷಿ ಇಲಾಖೆ ಕಾರ್ಯದರ್ಶಿ ಶಿವಯೋಗಿ ಕಳಸದ, ಕಸಾಪ ಗೌರವ ಕೋಶಾಧ್ಯಕ್ಷ ಬಿ.ಎಂ. ಪಟೇಲ್ ಪಾಂಡು ಹಾಗೂ ಗೌರವ ಕಾರ್ಯದರ್ಶಿ ನೇ.ಭ. ರಾಮಲಿಂಗಶೆಟ್ಟಿ ಇತರರಿದ್ದರು.

 ಕನ್ನಡಪ್ರಭ ಸೋಮವಾರ 11.7.2022

# 'ಕನ್ನಡ ಹೋರಾಟದಲ್ಲಿ ಕೋ.ಚೆ. ಮುಂಚೂಣಿ'

## ಪ್ರಜ್ಞಾವಂತಿಕೆಯ ವ್ಯಕ್ತಿತ್ವದ ವಿದ್ವಾಂಸ: ನ್ಯಾ.ಶಿವರಾಜ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಪ್ರಗತಿಶೀಲ ಪಂಥದ ಪ್ರಮುಖ ಸಾಹಿತಿಗಳಲ್ಲಿ ಒಬ್ಬರಾದ ಕೋ.ಚೆನ್ನಬಸಪ್ಪ ಅವರು ಕನ್ನಡ ಮತ್ತು ಕರ್ನಾಟಕದ ಬಹುತೇಕ ಹೋರಾಟಗಳಲ್ಲಿ ಮುಂಚೂಣಿಯಲ್ಲಿದ್ದರು ಎಂದು ಸುಪ್ರೀಂ ಕೋರ್ಟ್ ವಿಶ್ರಾಂತ ನ್ಯಾಯಮೂರ್ತಿ ಶಿವರಾಜ ವಿ.ಪಾಟೀಲ್ ಹೇಳಿದರು.

ಭಾನುವಾರ ಕನ್ನಡ ಸಾಹಿತ್ಯ ಪರಿಷತ್ತು, ಕೋ.ಚೆ ಸಾಹಿತ್ಯ ಮತ್ತು ಶಿಕ್ಷಣ ಟ್ರಸ್ಟ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಭಾರತೀಯ ವಿದ್ಯಾಭವನದ ಸಹಯೋಗದಲ್ಲಿ ನಗರದ ಗಾಂಧೀ ಸ್ಮಾರಕ ಭವನದಲ್ಲಿ ಆಯೋಜಿಸಿದ್ದ ಹಿರಿಯ ಸಾಹಿತಿ ಡಾ। ಕೋ.ಚೆನ್ನಬಸಪ್ಪ ಅವರ ಜನ್ಮಶತಾಬ್ದಿ ಸಮಾರಂಭ ಉದ್ಘಾಟಿಸಿ ಅವರು ಮಾತನಾಡಿದರು.

ಕೋ.ಚೆನ್ನಬಸಪ್ಪಅವರುತಮ್ಮಬದುಕಿನುದ್ದಕ್ಕೂ ಸಾಮಾನ್ಯ ಜನರ ಬಗ್ಗೆ ಅತೀವ ಕಾಳಜಿ, ಅನುಕಂಪ ಉಳ್ಳವರಾಗಿದ್ದರು, ವೃತ್ತಿಯಲ್ಲಿ ಎಷ್ಟು ಕಠೋರ ನಿಯಮಗಳನ್ನು ಪಾಲಿಸುತ್ತಿದ್ದರೋ ಅಷ್ಟೇ ಅಂತಃ ಕರಣದ ಭಾವದಲ್ಲಿ ವೃತ್ತಿ ಧರ್ಮವನ್ನು ನ್ಯಾಯಕ್ಕಾಗಿ, ನೊಂದವರಿಗಾಗಿ, ಬಡವರಿಗಾಗಿ, ಅಮಾಯಕರಿಗಾಗಿ ಮೀಸಲಿಟ್ಟು ಸತ್ಯ, ಶುದ್ಧ ಕಾಯಕ ಪ್ರಜ್ಞೆಯಲ್ಲಿ ಬಾಳಿದರು. ವಕೀಲರಾಗಿ, ನ್ಯಾಯಾಧೀಶರಾಗಿ, ಪತ್ರಿಕೆಯ ಸಂಪಾದಕರಾಗಿ ತಮ್ಮ ವೃತ್ತಿ ಧರ್ಮಕ್ಕೆ ಎಂದೂ ಎರವಾಗಿ ಬಾಳಿದವರಲ್ಲ. ಅವರು ಪ್ರಜ್ಞಾವಂತಿಕೆಯ ನ್ಯಾಯಯುತ ವ್ಯಕ್ತಿತ್ವದ ವಿದ್ವಾಂಸ. ಸಾಹಿತ್ಯ ಕ್ಷೇತ್ರದ ಆಸ್ತಿ, ಯಾರದೇ ಹಂಗಿಲ್ಲದೆ, ಹಮ್ಮಿಲ್ಲದೆ ಕನ್ನಡಕ್ಕಾಗಿ ಬದುಕಿದವರು ಎಂದು ಸ್ಮರಿಸಿದರು.

ಕಸಾಪ ಅಧ್ಯಕ್ಷ ಡಾ। ಮಹೇಶ್ ಜೋಶಿ ಮಾತನಾಡಿ, ನೇರ ನುಡಿ, ನುಡಿದಂತೆ ನಡೆಯುತ್ತ ಅನ್ಯಾಯವನ್ನು ಯಾವ ಭಯವಿಲ್ಲದೆ ವಿರೋಧಿಸುತ್ತಿದ್ದ ಮೇರು ವ್ಯಕ್ತಿತ್ವದ ಡಾ। ಕೋ. ಚೆನ್ನಬಸಪ್ಪನವರ ಹೋರಾಟ ಇಲ್ಲದಿದ್ದರೆ ಬಳ್ಳಾರಿಯ ನೆಲ ಕರ್ನಾಟಕದಲ್ಲಿ ಇರುತ್ತಿರಲಿಲ್ಲ. ಬಳ್ಳಾರಿ ಆಂಧ್ರದ ಪಾಲಾಗುತ್ತಿತ್ತು. ಅವರು ಕರ್ನಾಟಕ ಏಕೀಕರಣದ ರೂವಾರಿ, ಕನ್ನಡದ ಕಟ್ಟಾಳು, ಸಾಮಾಜಿಕ ಚಿಂತಕರೂ ಆಗಿದ್ದರು. ಚೆನ್ನಬಸಪ್ಪ ಅವರು 80ಕ್ಕೂ ಹೆಚ್ಚು ಕೃತಿಗಳನ್ನು ಸಾರಸ್ವತ ಲೋಕಕ್ಕೆ ನೀಡಿದ್ದಾರೆ ಎಂದು ಹೇಳಿದರು.



ಸಾಹಿತಿ ಡಾ। ಕೋ.ಚೆನ್ನಬಸಪ್ಪ ಅವರ ಜನ್ಮಶತಾಬ್ದಿ ಸಮಾರಂಭದಲ್ಲಿ ಅವರ ಭಾವಚಿತ್ರಕ್ಕೆ ಗಣ್ಯರು ಪುಷ್ಪನಮನ ಸಲ್ಲಿಸಿದರು.

ಕಾರ್ಯಕ್ರಮದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ। ವೂಡೇ ಪಿ.ಕೃಷ್ಣ, ಕೃಷಿ ಇಲಾಖೆ ಕಾರ್ಯದರ್ಶಿ ಶಿವಯೋಗಿ ಕಳಸದ, ಆಕಾಶವಾಣಿಯ ವಿಶ್ರಾಂತ ನಿರ್ದೇಶಕ ಡಾ। ಬಸವರಾಜ ಸಾದರ, ಹಿರಿಯ ಸಾಹಿತಿಗಳಾದ ಪ್ರೊ.ಕೆ.ಎಸ್.ಮಧುಸೂದನ, ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿ ನೇ.ಭ. ರಾಮಲಿಂಗಶೆಟ್ಟಿ ಉಪಸ್ಥಿತರಿದ್ದರು.

ಪ್ರಜಾವಾಣಿ

ಸೋಮವಾರ • ಜುಲೈ 11, 2022

## ಜನ್ಮಶತಾಬ್ದಿ ಸಮಾರಂಭದಲ್ಲಿ ನಿವೃತ್ತ ನ್ಯಾಯಮೂರ್ತಿ ಶಿವರಾಜ ವಿ. ಪಾಟೀಲ್

# ‘ದಿಟ್ಟ ಧ್ವನಿಯ ಚಿಂತನಾಶೀಲ ವ್ಯಕ್ತಿ ಕೋ. ಚೆನ್ನಬಸಪ್ಪ’

ಪ್ರಜಾವಾಣಿ ವಾರ್ತೆ

ಬೆಂಗಳೂರು: ‘ದಿಟ್ಟ ನಿರ್ಧಾರ, ಗಟ್ಟಿ ಧ್ವನಿ, ಬಹುಮುಖ ವ್ಯಕ್ತಿತ್ವ, ಚಿಂತನಾಶೀಲ ವ್ಯಕ್ತಿತ್ವ ಹೊಂದಿದ್ದ ಕೋ. ಚೆನ್ನಬಸಪ್ಪ ಅವರು, ಮಹಾತ್ಮ ಗಾಂಧೀಜಿ, ಅರವಿಂದ ಅವರ ವಿಚಾರಗಳ ಪ್ರಭಾವಕ್ಕೆ ಒಳಗಾಗಿದ್ದರು’ ಎಂದು ಸುಪ್ರೀಂ ಕೋರ್ಟ್ ನಿವೃತ್ತ ನ್ಯಾಯಮೂರ್ತಿ ಶಿವರಾಜ ವಿ. ಪಾಟೀಲ್ ಸ್ಮರಿಸಿದರು.

ಕನ್ನಡ ಸಾಹಿತ್ಯ ಪರಿಷತ್ತು, ಕೋಚೆ ಸಾಹಿತ್ಯ ಮತ್ತು ಶಿಕ್ಷಣ ಟ್ರಸ್ಟ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಭಾರತೀಯ ವಿದ್ಯಾಭವನ ಸಹಭಾಗಿತ್ವದಲ್ಲಿ ಭಾನುವಾರ ಆಯೋಜಿಸಿದ್ದ ಸ್ವಾತಂತ್ರ್ಯ ಹೋರಾಟಗಾರ ಹಾಗೂ ಸಾಹಿತಿ ಕೋ. ಚೆನ್ನಬಸಪ್ಪ ಅವರ ಜನ್ಮಶತಾಬ್ದಿ ಸಮಾರಂಭದಲ್ಲಿ ಅವರು ಮಾತನಾಡಿದರು.

‘ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಂಡು ಸೈದ್ಧಾಂತಿಕ ಬದುಕು ನಡೆಸಿದ್ದ ಕೋ. ಚೆನ್ನಬಸಪ್ಪ ಅವರು, ನ್ಯಾಯ ನಿಷ್ಠೆಗಳಲ್ಲಿ ಎಂದಿಗೂ ರಾಜಿ ಮಾಡಿಕೊಂಡವರಲ್ಲ. ಯಾರ ಹಂಗಿಲ್ಲದೆ ಕನ್ನಡಕ್ಕಾಗಿ ಬದುಕಿದವರು’ ಎಂದು ನೆನಪಿಸಿಕೊಂಡರು.

ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಮಹೇಶ ಜೋಶಿ ಮಾತನಾಡಿ, ‘ಕರ್ನಾಟಕ ಏಕೀಕರಣಕ್ಕೆ ಕೋ. ಚೆನ್ನಬಸಪ್ಪ ಶ್ರಮಿಸಿದ್ದರು. ಬಳ್ಳಾರಿ ಕರ್ನಾಟಕದಲ್ಲೇ ಉಳಿಯಲು ಕೋ. ಚೆನ್ನಬಸಪ್ಪನವರೇ ಕಾರಣ. ಅವರ ಹೋರಾಟ ಇಲ್ಲದಿದ್ದರೆ ಬಳ್ಳಾರಿಯ ನೆಲ ಕರ್ನಾಟಕದಲ್ಲಿ ಇರುತ್ತಿರಲಿಲ್ಲ. ಬಳ್ಳಾರಿ ಆಂಧ್ರಪ್ರದೇಶದ ಪಾಲಾಗುತ್ತಿತ್ತು’ ಎಂದರು.

ಕೃಷಿ ಇಲಾಖೆ ಕಾರ್ಯದರ್ಶಿ ಶಿವಯೋಗಿ ಕಳಸದ ಅವರು ಕೋಚೆ ಅವರ ಜತೆಗಿನ ಒಡನಾಟ ಮತ್ತು ಅವರ ಸರಳ ಜೀವನವನ್ನು ವಿವರಿಸಿದರು.



ನಗರದಲ್ಲಿ ಭಾನುವಾರ ನಡೆದ ಕೋ. ಚೆನ್ನಬಸಪ್ಪ ಅವರ ಜನ್ಮಶತಾಬ್ದಿ ಸಮಾರಂಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಮಹೇಶ್ ಜೋಶಿ, ಅಮೆರಿಕದ ಮೇರಿಲ್ಯಾಂಡ್ ಯುನಿವರ್ಸಿಟಿ ಡೀನ್ ಪ್ರಭುದೇವ್ ಕೋಣನ, ಸುಪ್ರೀಂ ಕೋರ್ಟ್ ನಿವೃತ್ತ ನ್ಯಾಯಮೂರ್ತಿ ಶಿವರಾಜ್ ವಿ. ಪಾಟೀಲ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ಕೃಷಿ ಇಲಾಖೆ ಕಾರ್ಯದರ್ಶಿ ಶಿವಯೋಗಿ ಕಳಸದ ಅವರು ಕೋ. ಚೆನ್ನಬಸಪ್ಪ ಅವರ ಭಾವಚಿತ್ರಕ್ಕೆ ನಮನ ಸಲ್ಲಿಸಿದರು –ಪ್ರಜಾವಾಣಿ ಚಿತ್ರ

ಕೋಚೆ ಅವರ ಮಗ, ಮೇರಿಲ್ಯಾಂಡ್ ಯೂನಿವರ್ಸಿಟಿಯ ಡೀನ್ ಡಾ. ಪ್ರಭುದೇವ ಕೋಣನ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಇದ್ದರು.

ಆಕಾಶವಾಣಿ ನಿವೃತ್ತ ನಿರ್ದೇಶಕ ಡಾ. ಬಸವರಾಜ ಸಾದರ ಅವರು, ಕೋಚೆ ಮತ್ತು ಪ್ರಗತಿಶೀಲ ಸಾಹಿತ್ಯ ಚಳವಳಿ ಕುರಿತು ವಿಷಯ ಮಂಡಿಸಿದರು. ಸಾಹಿತಿ ಪ್ರೊ. ಕೆ.ಎಸ್. ಮಧುಸೂಧನ ಅವರು ಕೋಚೆ ಅವರ ಅರವಿಂದ ಸಾಹಿತ್ಯ ಅನುವಾದಗಳು ವಿಷಯದ ಕುರಿತು ಉಪನ್ಯಾಸ ಮಾಡಿದರು. ಗೋಷ್ಠಿಯ ಅಧ್ಯಕ್ಷತೆಯನ್ನು ಪತ್ರಕರ್ತ ಲಕ್ಷ್ಮಣ ಕೊಡಸೆ ವಹಿಸಿದ್ದರು.

‘ನಾನು ಕಂಡಂತೆ ಕೋಚೆ’ ಕುರಿತ ಗೋಷ್ಠಿಯಲ್ಲಿ ಸಂಶೋಧಕ ಡಾ. ವೀರಶೆಟ್ಟಿ ಬಿ. ಗಾರಂಪಳ್ಳಿ, ಸಾಹಿತಿಗಳಾದ ಪ್ರಕಾಶ ಗಿರಿಮಲ್ಲನವರ, ಕೋಚೆ ಅವರ ಮಗಳಾದ ಶಾಂತ ಜಯಪ್ರಸಾದ್, ರಾಮಯ್ಯ ‘ಮೆಮೋರಿಯಲ್’ ಆಸ್ಪತ್ರೆ ಅಧ್ಯಕ್ಷ ಡಾ. ಕೆ.ಸಿ. ಗುರುದೇವ್, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಜಂಟಿ ನಿರ್ದೇಶಕ ಕೆ.ಬಿ. ಗುದಗಿ ಅವರು ಕೋಚೆ ಅವರೊಂದಿಗಿನ ಒಡನಾಟವನ್ನು ಹಂಚಿಕೊಂಡರು.

ಸಂಯುಕ್ತ ಕರ್ನಾಟಕ
11 ಜುಲೈ 2022 ಸೋಮವಾರ



# ಅರ್ಥಪೂರ್ಣ ಬದುಕಿನ ಕೋಚೆ

ಬೆಂಗಳೂರು: ಕೋ.ಚೆನ್ನಬಸಪ್ಪನವರು ಅವರು ನ್ಯಾಯದ ವಿಚಾರದಲ್ಲಿ ಯಾವತ್ತೂ ರಾಜೀ ಮಾಡಿಕೊಂಡವರಲ್ಲ ಎಂದು ಸುಪ್ರೀಂಕೋರ್ಟ್‌ನ ವಿಶ್ರಾಂತ ನ್ಯಾಯಮೂರ್ತಿ ಶಿವರಾಜ ವಿ.ಪಾಟೀಲ್ ಅವರು ಹೇಳಿದರು.

ಕನ್ನಡ ಸಾಹಿತ್ಯ ಪರಿಷತ್ತು, ಕೋಚೆ ಸಾಹಿತ್ಯ ಮತ್ತು ಶಿಕ್ಷಣ ಟ್ರಸ್ಟ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ಭಾರತೀಯ ವಿದ್ಯಾಭವನದ ಸಹಭಾಗಿತ್ವದಲ್ಲಿ ಏರ್ಪಡಿಸಲಾಗಿದ್ದ ಸ್ವಾತಂತ್ರ್ಯ ಹೋರಾಟಗಾರ, ಸಾಹಿತಿ ಕೋ.ಚೆನ್ನಬಸಪ್ಪನವರ ಜನ್ಮಶತಾಬ್ದಿ ಸಮಾರಂಭವನ್ನು ಉದ್ಘಾಟಿಸಿ ಮಾತನಾಡಿದ ಅವರು, ವಿದ್ವಾಂಸರೂ ಆಗಿದ್ದ ಕೋಚೆ ಮಾನವೀಯ ಮೌಲ್ಯಗಳೊಂದಿಗೆ ಅರ್ಥಪೂರ್ಣ ಬದುಕು ನಡೆಸಿದವರು ಎಂದರು.

ಅಧ್ಯಕ್ಷತೆವಹಿಸಿ ಮಾತನಾಡಿದ ಕಸಾಪ ಅಧ್ಯಕ್ಷ ಡಾ.ಮಹೇಶ ಜೋಶಿ, ಏಕೀಕರಣಕ್ಕೂ ಮುನ್ನವೇ ಬಳ್ಳಾರಿ ಅಂದಿನ ಮೈಸೂರು ರಾಜ್ಯದ 10ನೇ ಜಿಲ್ಲೆಯಾಗಲು ಕಾರಣರಾದವರೇ ಕೋ.ಚೆನ್ನಬಸಪ್ಪನವರು. 1953ರಲ್ಲಿ ಅವರು ನಡೆಸಿದ ಹೋರಾಟದ ಫಲಿತಫಲವಾಗಿ ಬಳ್ಳಾರಿ ನಮ್ಮ ರಾಜ್ಯದ ಭಾಗವಾಯಿತು. ಇಲ್ಲದಿದ್ದರೆ ನೆರೆಯ ಆಂಧ್ರಪ್ರದೇಶದ ಭಾಗವಾಗುತ್ತಿತ್ತು ಎಂದು ಸ್ಮರಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ.ಕೃಷ್ಣ ಅವರು ಮಾತನಾಡಿ, ಗಾಂಧಿವಾದಿಯಾಗಿದ್ದ ಕೋಚೆ ಅನ್ಯಾಯ ಕಂಡರೆ ಸಿಡಿದೇಳುವ ಸ್ವಭಾವದವರಾಗಿದ್ದರು ಎಂದರು. ಇದಾದ ನಂತರ ನಡೆದ ವಿಚಾರಗೋಷ್ಠಿಯಲ್ಲಿ ಪತ್ರಕರ್ತ ಲಕ್ಷ್ಮಣ ಕೊಡಸೆ, ಬೆಂಗಳೂರು ಆಕಾಶವಾಣಿ ಕೇಂದ್ರದ ನಿವೃತ್ತ ನಿರ್ದೇಶಕ ಡಾ.ಬಸವರಾಜ ಸಾದರ್, ಪ್ರೊ.ಕೆ.ಎಸ್.ಮಧುಸೂದನ್ ಮಾತನಾಡಿದರು.

ಕಲಬುರಗಿಯ ಹಿರಿಯ ಸಂಶೋಧಕ ಡಾ.ವೀರಶೆಟ್ಟಿ ಗಾರಂಪಳ್ಳಿ, ರಾಮಯ್ಯ ಮೆಮೋರಿಯಲ್ ಆಸ್ಪತ್ರೆ ಅಧ್ಯಕ್ಷ ಡಾ.ಕೆ.ಸಿ.ಗುರುದೇವ್, ಬಾಗಲಕೋಟೆಯ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಜಂಟೀ ನಿರ್ದೇಶಕ ಕೆ.ಐ.ಗುದಗಿ, ಸಾಹಿತಿ ಪ್ರಕಾಶ್ ಗಿರಿಮಲ್ಲಿನವರ್ ಮಾತನಾಡಿದರು. ಕೋಚೆ ಅವರ ಪುತ್ರಿ, ಶಾಂತಾ ಜಯಪ್ರಸಾದ್ ಉಪಸ್ಥಿತರಿದ್ದರು.



ಗಾಂಧಿ ಭವನದಲ್ಲಿ ಹಮ್ಮಿಕೊಳ್ಳಲಾಗಿದ್ದ ಕೋ.ಚೆನ್ನಬಸಪ್ಪ ಅವರ ಜನ್ಮಶತಾಬ್ದಿ ಸಮಾರಂಭವನ್ನು ಸುಪ್ರೀಂಕೋರ್ಟ್‌ನ ವಿಶ್ರಾಂತ ನ್ಯಾಯಮೂರ್ತಿ ಶಿವರಾಜ. ವಿ.ಪಾಟೀಲ್ ಅವರು ಕನ್ನಡ ಬಾವುಟವನ್ನು ಬೀಸುವ ಮೂಲಕ ಉದ್ಘಾಟಿಸಿದರು. ಕಸಾಪ ಅಧ್ಯಕ್ಷ ಡಾ.ಮಹೇಶ ಜೋಶಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ.ಕೃಷ್ಣ ಮುಂತಾದವರು ಉಪಸ್ಥಿತರಿದ್ದರು.

ಈ ಸಂಜೆ

Sun, 10 July 2022

ಕನ್ನಡ ಸಾಹಿತ್ಯ ಪರಿಷತ್ ವತಿಯಿಂದ ಗಾಂಧಿಭವನದಲ್ಲಿಂದು ಹಮ್ಮಿಕೊಂಡಿದ್ದ ನಾಡೋಜ ಡಾ.ಕೋ.ಚನ್ನಬಸಪ್ಪ ಅವರ ಜನ್ಮಶತಾಬ್ದಿ ಸಮಾರಂಭದಲ್ಲಿ ಕಸಾಪ ಅಧ್ಯಕ್ಷ ಡಾ.ಮಹೇಶ್ ಜೋಶಿ, ನಾಡೋಜ ವೂಡೆ ಪಿ.ಕೃಷ್ಣ, ನ್ಯಾಯಮೂರ್ತಿ ಶಿವರಾಜ್‌ಪಾಟೀಲ್, ಪ್ರಭುದೇವ್ ಕೋಣನ, ನೇ.ಭ.ರಾಮಲಿಂಗಶೆಟ್ಟಿ ಮತ್ತಿತರ ಗಣ್ಯರು ಪಾಲ್ಗೊಂಡಿದ್ದರು.

ಪ್ರಜಾವಾಣಿ

ಶುಕ್ರವಾರ • ಜುಲೈ 8, 2022



## ಪ್ರಶಸ್ತಿ ಪ್ರದಾನ

ವಿಶ್ವಮಾನವ ರಾಷ್ಟ್ರ ಕವಿ ಕುವೆಂಪು ಕಲಾನಿಕೇತನ ಸಂಸ್ಥೆ ಆಯೋಜಿಸಿದ್ದ ಕುವೆಂಪು 118ನೇ ಜಯಂತಿ ಮತ್ತು ದೇ. ಜವರೇಗೌಡ ಜಯಂತಿ ಕಾರ್ಯಕ್ರಮದಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಟಿ.ಎಸ್. ನಾಗಾಭರಣ ಅವರು ಅಬುದಾಬಿ(ದುಬೈ) ಕರ್ನಾಟಕ ಸಂಘದ ಅಧ್ಯಕ್ಷ ಸರ್ವೋತ್ತಮಶೆಟ್ಟಿ ಅವರಿಗೆ ದೇ.ಜ.ಗೌ ಪ್ರಶಸ್ತಿ ನೀಡಿ ಗೌರವಿಸಿದರು. (ಎಡದಿಂದ) ಕರ್ನಾಟಕ ವಿಕಾಸ ರಂಗದ ಅಧ್ಯಕ್ಷ ವ.ಚ. ಚನ್ನೇಗೌಡ, ಕವಿ ನಾಗತಿಹಳ್ಳಿ ರಮೇಶ್, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಮಹೇಶ್ ಜೋಶಿ, ಆದರ್ಶ ಸುಗಮ ಸಂಗೀತ ಅಧ್ಯಕ್ಷ ಕಿಕ್ಕೇರಿ ಕೃಷ್ಣಮೂರ್ತಿ, ಕುವೆಂಪು ಕನಾನಿಕೇತನ ಸಂಸ್ಥೆ ಅಧ್ಯಕ್ಷ ಕುವೆಂಪು ಪ್ರಕಾಶ್ ಇದ್ದರು. –ಪ್ರಜಾವಾಣಿ ಚಿತ್ರ

ವಿಶ್ವವಾಣಿ

07.07.2022 ಗುರುವಾರ
vishwavani.news



ವಿಶ್ವಮಾನವ ರಾಷ್ಟ್ರಕವಿ ಕುವೆಂಪು ಕಲಾನಿಕೇತನ ಸಂಸ್ಥೆ ರವೀಂದ್ರ ಕಲಾಕ್ಷೇತ್ರದಲ್ಲಿ ಆಯೋಜಿಸಿದ್ದ ಕುವೆಂಪು ಅವರ 118ನೇ ಜಯಂತಿ ಮತ್ತು ಕರ್ನಾಟಕ ರತ್ನ ಡಾ.ದೆ.ಜವರೇಗೌಡ ಜಯಂತಿಯಲ್ಲಿ ಅಬುದಾಬಿ–ದುಬೈ ಕರ್ನಾಟಕ ಸಂಘದ ಅಧ್ಯಕ್ಷ ಸರ್ವೋತ್ತಮ ಶೆಟ್ಟಿ ಅವರಿಗೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ.ಟಿ.ಎಸ್.ನಾಗಾಭರಣ ಅವರು ಕರ್ನಾಟಕ ರತ್ನ ಡಾ.ದೆಜಗೌ ಪ್ರಶಸ್ತಿ ನೀಡಿ ಗೌರವಿಸಿದರು. ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಡಾ.ಮಹೇಶ್ ಜೋಶಿ, ಕರ್ನಾಟಕ ವಿಕಾಸ ರಂಗದ ಅಧ್ಯಕ್ಷ ವ.ಚ.ಚನ್ನೇಗೌಡ, ಕವಿ ನಾಗತಳ್ಳಿ ರಮೇಶ್, ಆದರ್ಶ ಸುಗಮ ಸಂಗೀತ ಸಂಸ್ಥೆ ಅಧ್ಯಕ್ಷ ಕಿಕ್ಕೇರಿ ಕೃಷ್ಣಮೂರ್ತಿ, ಕಲಾನಿಕೇತನ ಸಂಸ್ಥೆ ಅಧ್ಯಕ್ಷ ಕುವೆಂಪು ಪ್ರಕಾಶ್ ಇದ್ದರು.

ಸಂಜೆವಾಣಿ
ಗುರುವಾರ 7 ಜುಲೈ 2022



ಕುವೆಂಪು ಕಲಾ ನಿಕೇತನ ವತಿಯಿಂದ ನಗರದ ರವೀಂದ್ರ ಕಲಾ ಕ್ಷೇತ್ರದಲ್ಲಿ ನಡೆದ ಕುವೆಂಪು ಹಾಗೂ ಕರ್ನಾಟಕ ರತ್ನ ಡಾ. ದೇ.ಜವರೇಗೌಡ ಜಯಂತಿ ಕಾರ್ಯಕ್ರಮದಲ್ಲಿ ಅಬುದಾಬಿ–ದುಬೈ ಕರ್ನಾಟಕ ಸಂಘದ ಅಧ್ಯಕ್ಷ ಸರ್ವೋತ್ತಮ ಶೆಟ್ಟಿ ಅವರಿಗೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ. ಟಿ.ಎಸ್. ನಾಗಾಭರಣರವರು ಕರ್ನಾಟಕ ರತ್ನ ಡಾ. ದೇ.ಜ.ಗೌ ಪ್ರಶಸ್ತಿ, ನಗದು, ಬೆಳ್ಳಿ ಪದಕ ನೀಡಿ ಗೌರವಿಸಿದರು. ಕಸಾಪ ಅಧ್ಯಕ್ಷ ನಾಡೋಜ ಡಾ. ಮಹೇಶ್ ಜೋಷಿ, ಶಿಕ್ಷಣ ತಜ್ಞ ವೂಡೇ ಪಿ. ಕೃಷ್ಣ, ಅಧ್ಯಕ್ಷ ಕುವೆಂಪು ಪ್ರಕಾಶ್ ಮತ್ತಿತರರು ಇದ್ದಾರೆ.

# ಶೇಷಾದ್ರಿಪುರಂ ಕಾಲೇಜಲ್ಲಿ ಸಂವಾದ

## ವಿದ್ಯಾರ್ಥಿಗಳ ಪ್ರಶ್ನೆಗಳಿಗೆ ಉತ್ತರಿಸಿದ ರಾಜವಂಶಸ್ಥ ಯದುವೀರ್

■ ವಿಕ ಸುದ್ದಿಲೋಕ ಮೈಸೂರು

ಹೆಬ್ಬಾಳದಲ್ಲಿರುವ ಶೇಷಾದ್ರಿಪುರಂ ಪದವಿ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನಾ ಘಟಕ, ರಾಷ್ಟ್ರೀಯ ರಕ್ಷಣಾ ದಳ ಮತ್ತು ಆಂತರಿಕ ಗುಣಮಟ್ಟ ಭರವಸೆ ಕೋಶ ಸಹಯೋಗದಲ್ಲಿ ಪುರಾತತ್ವ ಮತ್ತು ಇತಿಹಾಸದ ಸ್ಮಾರಕಗಳ ಸಂರಕ್ಷಣೆ ಕುರಿತು ರಾಜವಂಶಸ್ಥ ಯದುವೀರ ಕೃಷ್ಣದತ್ತ ಚಾಮರಾಜ ಒಡೆಯರ್ ಅವರೊಂದಿಗೆ ವಿದ್ಯಾರ್ಥಿಗಳ ಸಂವಾದ ಕಾರ್ಯಕ್ರಮ ಆಯೋಜಿಸಲಾಗಿತ್ತು.

ಯದುವೀರ್ ಕೃಷ್ಣದತ್ತ ಚಾಮರಾಜ ಒಡೆಯರ್ ಅವರನ್ನು ಕಾಲೇಜಿನ ವಿವಿಧ ಕಲಾತಂಡಗಳಾದ ಡೊಳ್ಳು, ತಾಳ, ಮದ್ದಳೆ, ಕಂಸಾಳೆ, ವೇದ ಘೋಷ, ಪೂರ್ಣಕುಂಭ, ಕೋಲಾಟ ಹಾಗೂ ಎನ್‌ಸಿಸಿ ವಿದ್ಯಾರ್ಥಿಗಳಿಂದ ಮೆರವಣಿಗೆ ಮೂಲಕ ಸ್ವಾಗತಿಸಲಾಯಿತು. ಕಾರ್ಯಕ್ರಮ ಉದ್ಘಾಟಿಸಿದ ಮಾತನಾಡಿದ ಯದುವೀರ ಕೃಷ್ಣದತ್ತ ಚಾಮರಾಜ್ ಒಡೆಯರ್, ಸ್ಮಾರಕಗಳು ನಮ್ಮ ದೇಶದ ಆಸ್ತಿ. ಇಂದು ನಾವು ಗುರುತಿಸುವ ಸ್ಮಾರಕಗಳು ಅಂದು ನಮ್ಮ ನಾಡಿನ ಜನರ ಜೀವನದ ಭಾಗವಾಗಿದ್ದವು. ಇಷ್ಟೇ ಅಲ್ಲದೇ, ಇವು ನಮ್ಮ ದೇಶದ ಸಾಂಸ್ಕೃತಿಕ ಗತವೈಭವವನ್ನು ಸಾರುತ್ತವೆ ಎಂದರು.

ಇಂದು ನಾವು ಪುರಾತನ ಕಟ್ಟಡಗಳನ್ನು ಮರು ನಿರ್ಮಾಣ ಮಾಡುವುದೇ ಆದರೆ ಹಳೆಯ ಪರಿಸರ ಸ್ನೇಹಿ ತಂತ್ರಜ್ಞಾನದ ಮಾದರಿಯಲ್ಲಿಯೇ ನಿರ್ಮಾಣ ಮಾಡಬೇಕು. ವಿದ್ಯಾರ್ಥಿಗಳು ಇತಿಹಾಸವನ್ನು ಅರಿತುಕೊಳ್ಳಬೇಕು. ನಮ್ಮ ನಾಡಿಗೆ ಸಂಬಂಧಿಸಿದ ಇತಿಹಾಸವನ್ನು ಇಂದಿನ ಪ್ರತಿ ವಿದ್ಯಾರ್ಥಿಗಳು ತಿಳಿದಿರಬೇಕು ಮತ್ತು ಅದನ್ನು ಸಂರಕ್ಷಿಸುವ ಹಲವು ಕಾರ್ಯಕ್ರಮಗಳಲ್ಲಿ ಸ್ವಯಂಪ್ರೇರಿತವಾಗಿ ಭಾಗವಹಿಸಬೇಕು ಎಂದು ಸಲಹೆ ನೀಡಿದರು. ನಂತರ ವಿದ್ಯಾರ್ಥಿಗಳ ಜತೆ ಸಂವಾದ ನಡೆಸಿದರು.

ಅಧ್ಯಕ್ಷತೆ ವಹಿಸಿದ್ದ ನಾಡೋಜ ಡಾ.ವೂಡೇ ಪಿ. ಕೃಷ್ಣ ಮಾತನಾಡಿದರು. ಕಾಲೇಜು ಆಡಳಿತ ಮಂಡಳಿ ಅಧ್ಯಕ್ಷ ಅನಂತರಾಮ್, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಧರ್ಮದರ್ಶಿಗಳಾದ ಸಿ.ಲೋಕನಾಥ್ ಮತ್ತು ಶಶಾಂಕ್ ಎಂ ಗೋಪಾಲ್, ಜೀವಮಾನ ಸದಸ್ಯರಾದ ಎಂ.ಎಲ್.ರವಿಶಂಕರ್, ಎನ್.ಎನ್. ಅನಿಲ್ ಕುಮಾರ್, ರಾಜವಂಶಸ್ಥರ ಆಪ್ತ ಕಾರ್ಯದರ್ಶಿ ರಘು, ಸಹವರ್ತಿ ಎ.ಪ್ರಸಾದ್, ಪ್ರಾಂಶುಪಾಲರಾದ ಪ್ರೊ.ಕೆ.ಸೌಮ್ಯ ಈರಪ್ಪ, ಶೇಷಾದ್ರಿಪುರಂ ಸ್ವತಂತ್ರ ಪದಪೂರ್ವ ಕಾಲೇಜಿನ ಪ್ರಾಂಶುಪಾಲರಾದ ಎನ್. ಅರ್ಚನಾಸ್ವಾಮಿ, ಎನ್‌ಎಸ್‌ಎಸ್ ಕಾರ್ಯಕ್ರಮಾಧಿಕಾರಿ ಡಾ. ಆರ್.ರಾಘವೇಂದ್ರ, ಎನ್‌ಸಿಸಿ ಕೇರ್ ಟೇಕರ್ ಆಫೀಸರ್ ಆರ್.ಕುಮಾರ್ ಇದ್ದರು.



ಹೆಬ್ಬಾಳದಲ್ಲಿರುವ ಶೇಷಾದ್ರಿಪುರಂ ಪದವಿ ಕಾಲೇಜಿನಲ್ಲಿ ರಾಜವಂಶಸ್ಥ ಯದುವೀರ ಕೃಷ್ಣದತ್ತ ಚಾಮರಾಜ ಒಡೆಯರ್ ಅವರೊಂದಿಗೆ ವಿದ್ಯಾರ್ಥಿಗಳ ಸಂವಾದ ಕಾರ್ಯಕ್ರಮ ನಡೆಯಿತು.

ಆಂದೋಲನ

Jul 6, 2022

# ಯದುವೀರ್ ಸಂವಾದ

## ದೇಶದ ಸಾಂಸ್ಕೃತಿಕ ಗತವೈಭವ ಸಾರುವ ಸ್ಮಾರಕಗಳು: ಯದುವೀರ್



ಮೈಸೂರು: ಸ್ಮಾರಕಗಳು ನಮ್ಮ ದೇಶದ ಸಾಂಸ್ಕೃತಿಕ ಗತ ವೈಭವವನ್ನು ಸಾರುತ್ತವೆ ಎಂದು ರಾಜವಂಶಸ್ಥ ಯದುವೀರ್ ಕೃಷ್ಣದತ್ತ ಚಾಮರಾಜ ಒಡೆಯರ್ ಹೇಳಿದರು.

ನಗರದ ಹೆಬ್ಬಾಳು ರಿಂಗ್ ರಸ್ತೆಯಲ್ಲಿರುವ ಶೇಷಾದ್ರಿಪುರಂ ಪದವಿ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನಾ ಘಟಕ, ರಾಷ್ಟ್ರೀಯ ರಕ್ಷಣಾ ದಳ ಮತ್ತು ಆಂತರಿಕ ಗುಣಮಟ್ಟ ಭರವಸೆ ಕೋಶದ ಸಹಯೋಗದಲ್ಲಿ ನಡೆದ ಪುರಾತತ್ವ ಮತ್ತು ಇತಿಹಾಸದ ಸ್ಮಾರಕಗಳ ಸಂರಕ್ಷಣೆ ಕುರಿತ ಸಂವಾದ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಪುರಾತನ ಕಟ್ಟಡಗಳನ್ನು ಮರು ನಿರ್ಮಾಣ ಮಾಡುವುದಾದರೆ, ಹಳೆಯ ಪರಿಸರ ಸ್ನೇಹಿ ತಂತ್ರಜ್ಞಾನದ ಮಾದರಿಯಲ್ಲಿಯೇ ನಿರ್ಮಾಣ ಮಾಡಬೇಕು ಎಂದರು.

ನಾಡೋಜ ಡಾ.ವೂಡೇ ಪಿ.ಕೃಷ್ಣ, ಕಾಲೇಜು ಆಡಳಿತ ಮಂಡಳಿ ಅಧ್ಯಕ್ಷ ಬಿ.ವಿ.ಅನಂತರಾಮ್, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಧರ್ಮದರ್ಶಿ ಬಿ.ಸಿ.ಲೋಕನಾಥ್, ಶಶಾಂಕ್ ಎಂ.ಗೋಪಾಲ್, ಜೀವಮಾನ ಸದಸ್ಯರಾದ ಎಂ.ಎಲ್.ರವಿಶಂಕರ್, ಎನ್.ಎನ್.ಅನಿಲ್‌ಕುಮಾರ್, ರಾಜವಂಶಸ್ಥರ ಆಪ್ತ ಕಾರ್ಯದರ್ಶಿ ರಘು, ಸಹವರ್ತಿ ಬಿ.ಎ.ಪ್ರಸಾದ್, ಪ್ರಾಂಶುಪಾಲರಾದ ಪ್ರೊ.ಕೆ.ಸೌಮ್ಯ ಈರಪ್ಪ, ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರಾದ ಎಸ್.ಅರ್ಚನಾ ಸ್ವಾಮಿ, ಎನ್‌ಎಸ್‌ಎಸ್ ಕಾರ್ಯಕ್ರಮಾಧಿಕಾರಿ ಡಾ.ಆರ್.ರಾಘವೇಂದ್ರ, ಎನ್‌ಸಿಸಿ ಕೇರ್‌ಟೇಕರ್ ಆಫೀಸರ್ ಆರ್.ಕುಮಾರ್ ಹಾಜರಿದ್ದರು.

ಕನ್ನಡಪ್ರಭ
Tue, 05 July 2022

# ಸಾಂಸ್ಕೃತಿಕ ಗತವೈಭವ ಸಾರುವ ಸ್ಮಾರಕಗಳು

## ಸಂವಹನ ಕಾರ್ಯಕ್ರಮದಲ್ಲಿ ರಾಜವಂಶಸ್ಥ ಯದುವೀರ ಕೃಷ್ಣದತ್ತ ಚಾಮರಾಜ ಒಡೆಯರ್ ಅಭಿಮತ

• ಕನ್ನಡಪ್ರಭ ವಾರ್ತೆ ಮೈಸೂರು

ಸ್ಮಾರಕಗಳು ನಮ್ಮ ದೇಶದ ಸಾಂಸ್ಕೃತಿಕ ಗತವೈಭವವನ್ನು ಸಾರುತ್ತವೆ ಎಂದು ರಾಜವಂಶಸ್ಥ ಯದುವೀರ ಕೃಷ್ಣದತ್ತ ಚಾಮರಾಜ ಒಡೆಯರ್ ತಿಳಿಸಿದರು.

ಹೆಬ್ಬಾಳದಲ್ಲಿರುವ ಶೇಷಾದ್ರಿಪುರಂ ಪದವಿ ಕಾಲೇಜು ಎನ್‌ಎಸ್‌ಎಸ್ ಘಟಕ, ರಾಷ್ಟ್ರೀಯ ರಕ್ಷಣಾ ದಳ ಮತ್ತು ಆಂತರಿಕ ಗುಣಮಟ್ಟ ಭರವಸೆ ಕೋಶ ಸಹಯೋಗದಲ್ಲಿ ಸೋಮವಾರ ಆಯೋಜಿಸಿದ್ದ ಪುರಾತತ್ವ ಮತ್ತು ಇತಿಹಾಸದ ಸ್ಮಾರಕಗಳ ಸಂರಕ್ಷಣೆ ಕುರಿತು ವಿದ್ಯಾರ್ಥಿಗಳೊಂದಿಗೆ ಸಂವಹನ ಕಾರ್ಯಕ್ರಮವನ್ನು ಅವರು ಉದ್ಘಾಟಿಸಿ ಮಾತನಾಡಿದರು.

ಸ್ಮಾರಕಗಳು ನಮ್ಮ ದೇಶದ ಆಸ್ತಿ. ಇಂದು ನಾವು ಗುರುತಿಸುವ ಸ್ಮಾರಕಗಳು ಅಂದು ನಮ್ಮ ನಾಡಿನ ಜನರ ಜೀವನದ ಭಾಗವಾಗಿದ್ದವು. ಇತಿಹಾಸದಲ್ಲಿ ನಿರ್ಮಾಣಗೊಂಡ ಸ್ಮಾರಕಗಳು ವಿಶೇಷ ಪರಿಸರಸ್ನೇಹಿ ತಂತ್ರಜ್ಞಾನ ಆಧಾರಿತವಾಗಿ ನಿರ್ಮಾಣಗೊಂಡಿದ್ದವು. ಇಂದು ನಾವು ಪುರಾತನ ಕಟ್ಟಡಗಳನ್ನು ಮರುನಿರ್ಮಾಣ ಮಾಡುವುದೇ ಆದರೆ ಹಳೆಯ ಪರಿಸರ ಸ್ನೇಹಿ ತಂತ್ರಜ್ಞಾನದ ಮಾದರಿಯಲ್ಲಿಯೇ ನಿರ್ಮಾಣ ಮಾಡಬೇಕು ಎಂದು ಅವರು ಹೇಳಿದರು.



ಮೈಸೂರಿನ ಶೇಷಾದ್ರಿಪುರಂ ಪದವಿ ಕಾಲೇಜಿನಲ್ಲಿ ಸೋಮವಾರ ನಡೆದ ಪುರಾತತ್ವ ಮತ್ತು ಇತಿಹಾಸದ ಸ್ಮಾರಕಗಳ ಸಂರಕ್ಷಣೆ ಕುರಿತು ವಿದ್ಯಾರ್ಥಿಗಳೊಂದಿಗೆ ಸಂವಹನ ಕಾರ್ಯಕ್ರಮವನ್ನು ರಾಜವಂಶಸ್ಥ ಯದುವೀರ ಕೃಷ್ಣದತ್ತ ಚಾಮರಾಜ ಒಡೆಯರ್ ಉದ್ಘಾಟಿಸಿದರು.

ವಿದ್ಯಾರ್ಥಿಗಳು ಇತಿಹಾಸ ಅರಿತುಕೊಳ್ಳಬೇಕು. ನಮ್ಮ ನಾಡಿಗೆ ಸಂಬಂಧಿಸಿದ ಇತಿಹಾಸದ ಅರಿವನ್ನು ಇಂದಿನ ಪ್ರತಿ ವಿದ್ಯಾರ್ಥಿಗಳು ತಿಳಿದಿರಬೇಕು. ಮತ್ತು ಅದನ್ನು ಸಂರಕ್ಷಿಸುವ ಹಲವು ಕಾರ್ಯಕ್ರಮಗಳಲ್ಲಿ ಸ್ವಯಂ ಪ್ರೇರಿತವಾಗಿ ಭಾಗವಹಿಸಬೇಕು ಎಂದು ಅವರು ಸಲಹೆ ನೀಡಿದರು. ನಂತರ ವಿದ್ಯಾರ್ಥಿಗಳು ಸಂವಾದ ನಡೆಸಿದರು.

ಸಂಸ್ಥೆಯ ಅಧ್ಯಕ್ಷ ನಾಡೋಜ ಡಾ. ಪ್ರೊ. ಪಿ. ಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ಕಾಲೇಜು ಆಡಳಿತ ಮಂಡಳಿ ಅಧ್ಯಕ್ಷ ಬಿ.ವಿ. ಅನಂತರಾಮ್, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಧರ್ಮದರ್ಶಿಗಳಾದ ಬಿ.ಸಿ. ಲೋಕನಾಥ್, ಶಶಾಂಕ್ ಎಂ ಗೋಪಾಲ್, ಜೀವಮಾನ ಸದಸ್ಯರಾದ ಎಂ.ಎಲ್. ರವಿಶಂಕರ್, ಎನ್.ಎನ್. ಅನಿಲ್‌ಕುಮಾರ್, ಪ್ರಾಂಶುಪಾಲೆ ಸೌಮ್ಯ ಈರಪ್ಪ, ಪಿಯು ಕಾಲೇಜಿನ ಪ್ರಾಂಶುಪಾಲೆ ಅರ್ಚನಾ ಸ್ವಾಮಿ, ಎನ್‌ಎಸ್‌ಎಸ್ ಕಾರ್ಯಕ್ರಮಾಧಿಕಾರಿ ಡಾ. ರಾಘವೇಂದ್ರ, ಎನ್‌ಸಿಸಿ ಕೇರ್ ಟೇಕರ್ ಆಫೀಸರ್ ಕುಮಾರ್ ಇದ್ದರು. ಪೂಜಾ ಮತ್ತು ಹರ್ಷಿತ ನಗದಿ ಪ್ರಾರ್ಥಿಸಿದರು. ಡಾ. ಲಾವಣ್ಯ, ಕೆ. ಶ್ರೀದೇವಿ ಪ್ರಭು ನಿರೂಪಿಸಿದರು.

# ಕುಳವನ ಪಡಿಪಾಟಲು ಆತ್ಮಕಥನ ಬಿಡುಗಡೆ



ಪರಸ್ಪರ ಸಂಸ್ಥೆ ಏರ್ಪಡಿಸಿದ್ದ ಜಲಮಂಡಳಿ ರಾಮಚಂದ್ರ ಅವರ ಆತ್ಮಕಥನ ಕುಳವನ ಪಡಿಪಾಟಲು ಕೃತಿಯನ್ನು ಚಿಂತಕ ಶೂದ್ರ ಶ್ರೀನಿವಾಸ್, ವಿಧಾನಪರಿಷತ್ ಸದಸ್ಯ ಯು.ಬಿ.ವೆಂಕಟೇಶ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ ಬಿಡುಗಡೆಗೊಳಿಸಿದರು.

ಸಂ.ಕ.ಸಮಾಚಾರ, ಬೆಂಗಳೂರು

ಕುಳವನ ಸಮುದಾಯದವರಲ್ಲಿ ಆತ್ಮವಿಶ್ವಾಸ ತುಂಬಿ ಸ್ವಾಭಿಮಾನಿಗಳನ್ನಾಗಿ ರೂಪಿಸುವ ಕೆಲಸವನ್ನು ಹಮ್ಮಿಕೊಳ್ಳಬೇಕೆಂದು ಚಿಂತಕ ಶೂದ್ರ ಶ್ರೀನಿವಾಸ ಹೇಳಿದರು..

ರವೀಂದ್ರಕಲಾಕ್ಷೇತ್ರದಲ್ಲಿ ಜಲಮಂಡಳಿ ರಾಮಚಂದ್ರ ಅವರ ಆತ್ಮಕಥನ 'ಕುಳವನ ಪಡಿಪಾಟಲು ಕೃತಿಯನ್ನು ಬಿಡುಗಡೆಗೊಳಿಸಿ ಮಾತನಾಡಿದ ಅವರು, ಕುಳವನ ಸಮುದಾಯದಲ್ಲಿ ಹುಟ್ಟಿಸ್ವಾಭಿಮಾನದಿಂದ ಬೆಳೆದು ಮೇಲ್ಮಟ್ಟಕ್ಕೆ ಏರಿದ ರಾಮಚಂದ್ರ ಎಲ್ಲರಿಗೂ ಮಾದರಿ. ಅವರುತಾವುಬೆಳೆದರೀತಿಯಲ್ಲಿಯೇ ಸಮುದಾಯದವರಲ್ಲಿ ಆತ್ಮ ವಿಶ್ವಾಸ ತುಂಬಿ ವ್ಯಕ್ತಿತ್ವ ರೂಪಿಸಿಕೊಳ್ಳಲು ಪ್ರಯತ್ನಿಸಬೇಕೆಂದು ಕಿವಿಮಾತು ಹೇಳಿದರು.

ಸಮಾರಂಭವನ್ನು ಉದ್ಘಾಟಿಸಿದ ವಿಧಾನ ಪರಿಷತ್ ಸದಸ್ಯ ಯು.ಬಿ. ವೆಂಕಟೇಶ್ ಮಾತನಾಡಿ, ತಳಮಟ್ಟದ ಶೋಷಿತ ಸಮಾಜದ ಒಬ್ಬ ವ್ಯಕ್ತಿ ಹೆಮ್ಮರವಾಗಿ ಬೆಳೆದು ನಿಂತಿರುವುದು ಸಂತೋಷದ ವಿಚಾರ. ಅವರ ಸರಳ ಸಜ್ಜನಿಕೆಯಿಂದ ಸಾಧನೆ ಮಾಡಲು ಸಾಧ್ಯ ಎಂಬುದನ್ನು ಅವರು ತೋರಿಸಿಕೊಟ್ಟು ಇತರರಿಗೆ ಮಾದರಿಯಾಗಿದ್ದಾರೆಂದರು.

ನಾಟಕ, ರಂಗಭೂಮಿಯಲ್ಲೂ ತಮ್ಮ ಛಾಪು ಮೂಡಿಸಿದ ಅವರು ಸತತ 108ಗಂಟೆಗಳ ಕಾಲ ನಾಟಕೋತ್ಸವ ನಡೆಸಿರುವುದು ಅವರ ಸಾಧನೆಯ ಮೈಲಿಗಲ್ಲಾಗಿದೆ. 70ರ ಹರೆಯದಲ್ಲಿಯೂ ರಂಗಭೂಮಿ ಚಟುವಟಿಕೆಯಲ್ಲಿ ಕ್ರಿಯಾಶೀಲರಾಗಿದ್ದು ಇನ್ನಷ್ಟು ಹೆಮ್ಮರವಾಗಿ ಬೆಳೆದು ಕಲೆಯನ್ನು ಪೋಷಿಸಲಿ ಎಂದು ಹೇಳಿದರು. ಸಾಹಿತಿ ಮಲ್ಲೇಪುರ ವೆಂಕಟೇಶ್, ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ.ಕೃಷ್ಣ ಮಾತನಾಡಿದರು. ಕರ್ನಾಟಕ ನಾಟಕ ಅಕಾಡೆಮಿ ಅಧ್ಯಕ್ಷ ಆರ್.ಭೀಮಸೇನ ಮತ್ತಿತರರಿದ್ದರು. ಬಳಿಕ ಕೃಷ್ಣ ಸಂಧಾನ ನಾಟಕ ಪ್ರದರ್ಶನವಾಯಿತು.

ತಾಳಿಕೋಟಿ ಟೈಮ್ಸ್ ಬುಧವಾರ-27-07-2022

# ಸೇವೆ ಮತ್ತು ತ್ಯಾಗವನ್ನು ಜಗತ್ತು ಸ್ಮರಿಸುತ್ತದೆ -ಡಾ.ವೂಡೇ ಪಿ.ಕೃಷ್ಣ

ತಾಳಿಕೋಟೆ: ಗ್ರಾಮೀಣ ಭಾರತವೇ ನಿಜವಾದ ಭಾರತವಾಗಿದೆ ಹಾಗೆಯೇ ಗ್ರಾಮೀಣ ಜನರ ಬದುಕು ಹಸನಾಗ ಬೇಕಾದರೆ ಎನ್ಎಸ್ಎಸ್ ವಿದ್ಯಾರ್ಥಿಗಳು ಸ್ವಚ್ಛ ಭಾರತ ಜಾಗೃತಿಯ ಜೊತೆಗೆ ಶ್ರಮದಾನವೆಂಬುದು ಬಹು ಮುಖ್ಯವಾಗಿದೆ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ. ಬೆಂಗಳೂರು ಇದರ ಅಧ್ಯಕ್ಷರಾದ ನಾಡೋಜ ಡಾ.ವೂಡೇ ಪಿ.ಕೃಷ್ಣ ಅವರು ಹೇಳಿದರು.

75ನೇ ಸ್ವಾತಂತ್ರ್ಯ ಅಮೃತ ಮಹೋತ್ಸವ ಅಂಗವಾಗಿ ಕರ್ನಾಟಕ ಸರ್ಕಾರದ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಬೆಂಗಳೂರ. ರಾಷ್ಟ್ರೀಯ ಸೇವಾ ಯೋಜನೆ. ಯುವ ಸಬಲೀಕರಣ ಇಲಾಖೆ ಹಾಗೂ ಶ್ರೀ ಎಚ್.ಎಸ್.ಪಾಟೀಲ ಸ್ವತಂತ್ರ ಪದವಿಪೂರ್ವ ಮಹಾವಿದ್ಯಾಲಯದ ಸಂಯುಕ್ತ ಆಶ್ರಯದಲ್ಲಿ ಶ್ರೀ ಸಂಗಮೇಶ್ವರ ಸಭಾಭವನದಲ್ಲಿ ನಡೆದ ಎನ್ಎಸ್ಎಸ್ ಶಿಬಿರಾರ್ಥಿಗಳಿಗೆ 4ನೇ ದಿನದ ಕಾರ್ಯಾಗಾರ ಹಾಗೂ ಶ್ರಮದಾನ ಶಿಬಿರದ ಪ್ಲಾಸ್ಟಿಕ್ ಮುಕ್ತ ಪರಿಸರ ಉಳಿಸಿ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಆಗಮಿಸಿ ಮಾತನಾಡುತ್ತಿದ್ದ ಅವರು ಸೇವೆ ಮತ್ತು ತ್ಯಾಗವನ್ನು ಯಾರು ಮಾಡುತ್ತಾರೋ ಅವರನ್ನು ಜಗತ್ತು ಸ್ಮರಿಸುತ್ತದೆ. ನಿಮ್ಮ ಚಿಂತನೆಗಳು ಯಾವಾಗಲೂ ಬಡವರ ಪರ, ರೈತರ ಪರ ಮತ್ತು ಹಳ್ಳಿಯ ಪರವಾಗಿರಬೇಕು. ಎನ್. ಎಸ್.ಎಸ್ ಶಿಬಿರವು ಗಾಂಧಿಯವರ ತತ್ವಗಳನ್ನು ಆಧರಿಸಿವೆ. ಪ್ರತಿಯೊಬ್ಬರೂ ನಿಸ್ವಾರ್ಥ ಭಾವದಿಂದ ಕೆಲಸ ಮಾಡಿದಾಗ ಮಾತ್ರ ದೇಶದ ಅಭಿವೃದ್ಧಿ ಹೊಂದಲು ಸಾಧ್ಯವೆಂದ ಅವರು ದೇಶ ಸಾಕಷ್ಟು ಸಮಸ್ಯೆಗಳನ್ನು ಎದುರಿಸುತ್ತಿದೆ. ಇಂತಹ ಸಂದರ್ಭದಲ್ಲಿ ದಾನಗಳಲ್ಲೇ ಶ್ರೇಷ್ಠ ದಾನವಾದ ಶ್ರಮದಾನದ ಮೂಲಕ ದೇಶ ಸೇವೆ ಮಾಡಿ ಜೀವನ ಸಾರ್ಥಕ ಮಾಡಿಕೊಳ್ಳಿರಿ ಎಂದು ಹೇಳಿದ ಅವರು ರೂರಲ್ ಇಂಡಿಯಾ ಇಸ್ ದಿ ರಿಯಲ್ ಇಂಡಿಯಾ ಎಂದು ಗಾಂಧಿಯವರು ಹೇಳಿದ ಮಾತನ್ನು ಸ್ಮರಿಸಿಕೊಂಡರು.

ಇನ್ನೋರ್ವ ಅತಿಥಿಗಳಾದ ಖ್ಯಾತ ಸಾಹಿತಿಗಳಾದ ಬಿ.ಆರ್.ಪೊಲೀಸ್‌ಪಾಟೀಲ ಪ್ರಾಸ್ತಾವಿಕವಾಗಿ ಮಾತನಾಡಿ ಎನ್ ಎಸ್ಎಸ್ ವಿದ್ಯಾರ್ಥಿಗಳು ಮಾಡುವ ಪ್ರತಿ ಕಾರ್ಯವು



ತಾಳಿಕೋಟೆ : ಎನ್ಎಸ್ಎಸ್ ಶಿಬಿರಾರ್ಥಿಗಳಿಗೆ 4ನೇ ದಿನದ ಕಾರ್ಯಾಗಾರದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ.ಬೆಂಗಳೂರು ಇದರ ಅಧ್ಯಕ್ಷರಾದ ನಾಡೋಜ ಡಾ.ವೂಡೇ ಪಿ.ಕೃಷ್ಣ ಅವರನ್ನು ಎಸ್.ಎಸ್.ವಿದ್ಯಾಸಂಸ್ಥೆಯಿಂದ ಸನ್ಮಾನಿಸಿ ಗೌರವಿಸಲಾಯಿತು.

ಜೀವನಕ್ಕೆ ದಾರಿ ತೋರಿಸುತ್ತದೆ ಅಲ್ಲದೇ ಸಮಾಜಕ್ಕೆ ಮಾದರಿಯಾಗುತ್ತದೆ ಎನ್.ಎಸ್.ಎಸ್. ಘಟಕ ಲೈಫ್ ಟೈಮ್ ವರ್ಕಶಾಪ್ ಆಗಿ ಕಾರ್ಯನಿರ್ವಹಿಸಬೇಕೆಂದರು.

ಇನ್ನೋರ್ವ ಅತಿಥಿ ತಾಳಿಕೋಟೆ ತಾಲ್ಲೂಕಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಆರ್.ಎಲ್.ಕೊಪ್ಪದ ಎನ್ಎಸ್ಎಸ್ ಧ್ಯೇಯೋದ್ದೇಶ ಮತ್ತು ಸದೃಢ ದೇಹದ ಜೊತೆ ಉತ್ತಮ ಆರೋಗ್ಯ ಕುರಿತು ವಿದ್ಯಾರ್ಥಿಗಳಿಗೆ ತಿಳಿ ಹೇಳಿದರು.

ಸಾನಿಧ್ಯ ವಹಿಸಿದ್ದ ಕಪ್ಪತಗುಡ್ಡ ಶ್ರೀ ನಂದಿವೇರಿ ಸಂಸ್ಥಾನಮಠದ ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಮಾತನಾಡಿ ಎಲ್ಲರೂ ಬುದ್ಧ,ಬಸವ,ಗಾಂಧಿ, ಅಂಬೇಡ್ಕರ್ ಮುಂತಾದವರ ತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕೆಂದು ಅವರ ಆದರ್ಶ ವಿದ್ಯಾರ್ಥಿಗಳಿಗೆ ಸ್ಫೂರ್ತಿದಾಯಕವಾಗಿದ್ದು ಅವರಂತೆ ಜಗತ್ತಿನಲ್ಲಿ ಗುರುತಿಸಿಕೊಳ್ಳುವಂತಹ ಸಾಧನೆ ಮಾಡಬೇಕೆಂದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಎಸ್.ಎಸ್.ವಿದ್ಯಾ ಸಂಸ್ಥೆಯ ಅಧ್ಯಕ್ಷರಾದ ಎಚ್.ಎಸ್.ಪಾಟೀಲ ಅವರು ಸುಂದರ ಪರಿಸರ ಕಲ್ಪನೆಯನ್ನು ವಿದ್ಯಾರ್ಥಿಗಳು ಜೀವನದಲ್ಲಿ ಅಳವಡಿಸಿಕೊಳ್ಳುವ ಕುರಿತು ತಿಳಿ ಹೇಳಿದರು. ಪ್ರಾಚಾರ್ಯರಾದ ಶ್ರೀಮತಿ ಮಲ್ಲಮ್ಮ. ಎಸ್.ಬಿರಾದಾರ, ಶಿಕ್ಷಕ ಭೀಮಣ್ಣ ಅರಕೇರಿ ಸಂಸ್ಥೆಯ ಕಾರ್ಯದರ್ಶಿ ಸಂತೋಷ ಪಾಟೀಲ, ಸುನೀಲ ಪಾಟೀಲ, ಕಿರಣ ಪಾಟೀಲ, ಪ್ರಾಚಾರ್ಯ ಅಶೋಕ ಕಟ್ಟಿ, ಎಸ್.ವ್ಹಿ. ಜಾಮಗೊಂಡಿ, ಎಸ್.ಸಿ.ಗುಡಗುಂಟಿ, ಎನ್.ಬಿ.ಪಾಟೀಲ, ಎಂ.ಎಸ್.ರಾಯಗೊಂಡ, ಎಸ್.ಬಿ. ಮಂಗ್ಯಾಳ, ವ್ಹಿ.ಎಚ್.ಘಟನೂರ, ಶ್ರೀಮತಿ ಎ.ಸಿ.ಗುಮಶೆಟ್ಟಿ, ಕುಮಾರಿ ಜ್ಯೋತಿ ಪೊಲೀಸ್‌ಪಾಟೀಲ, ಜೆ.ಎಂ.ಕೊಣ್ಣೂರ, ಮುತ್ತು ಬಿರಾದಾರ, ವಿಠ್ಠಲ ವಿಜಾಪೂರ, ಎಸ್.ಎಸ್.ಪಾಟೀಲ, ಕುಮಾರಿ ಆರ್.ಎಚ್. ಯರದಿಹಾಳ, ವ್ಹಿ.ಎಸ್.ಬಿರಾದಾರ, ಪ್ರಕಾಶ ಪಾಟೀಲ, ಆರ್.ಬಿ.ಪಾಟೀಲ, ಶ್ರೀಮತಿ ಎಸ್.ಬಿ.ಸಾತಿಹಾಳ, ಎಸ್.ಎಸ್.ಬಿದರಕುಂದಿ, ಶಿವು ನಾಯಕ, ಎಸ್.ಎಂ.ಸಜ್ಜನ, ಜಿ.ಎಸ್. ಹುಸರೂರ, ಶ್ರೀಮತಿ ಸನಾ ಬೇಪಾರಿ, ಎಸ್. ಎಂ.ಬಂಡಿಮನಿ, ಪ್ರಕಾಶ ವಾಲೀಕಾರ, ಮೊದಲಾದವರು ಇದ್ದರು. ಪ್ರಕಾಶ ಪಾಟೀಲ ಸ್ವಾಗತಿಸಿದರು, ಬಿ.ಎ.ಹಿರೇಹೊಳಿ ನಿರೂಪಿಸಿದರು. ಎಸ್.ಸಿ.ಗುಡಗುಂಟಿ ವಂದಿಸಿದರು.

ಕಲಾಪ್ರಿಯ 26-07-2022

## ರಾಜ್ಯ ಮಟ್ಟದ ನಾಲ್ಕನೇ ಮಹಿಳಾ ಸಾಂಸ್ಕೃತಿಕ ಸಮಾವೇಶ

# ವಚನ ರಾಮಾಯಣ ಕೃತಿ ಲೋಕಾರ್ಪಣೆ



ಬೆಂಗಳೂರು: ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಕೇಂದ್ರ ಸಾಹಿತ್ಯ ಅಕಾಡೆಮಿಯ ಸಹಯೋಗದ ವತಿಯಿಂದ ಬೆಂಗಳೂರಿನ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಏರ್ಪಡಿಸಿದ್ದ ರಾಜ್ಯ ಮಟ್ಟದ ನಾಲ್ಕನೇ ಮಹಿಳಾ ಸಾಂಸ್ಕೃತಿಕ ಸಮಾವೇಶವನ್ನು, ಶಿಕ್ಷಣ ತಜ್ಞರು, ಸಾಹಿತಿಗಳಾದ ಡಾ.ಗೀತಾ ರಾಮಾನುಜಂ ಅವರು ಉದ್ಘಾಟಿಸಿದರು. ಗಾಂಧಿ ಭವನದ ಅಧ್ಯಕ್ಷರಾದ ನಾಡೋಜ ಡಾ.ವೂಡೇ ಪಿ. ಕೃಷ್ಣ ಅವರು ಸಮಾವೇಶದ ಅಧ್ಯಕ್ಷರಾದ ಸಾಹಿತಿ ಶ್ರೀಮತಿ ಕಮಲಾ ರಾಜೇಶ್ ಅವರ " ವಚನ ರಾಮಾಯಣ " ಕೃತಿಯನ್ನು ಲೋಕಾರ್ಪಣೆ ಮಾಡಿದರು. ಚಿತ್ರದಲ್ಲಿ: ಕೇಂದ್ರ ಸಾಹಿತ್ಯ ಅಕಾಡೆಮಿ ಸದಸ್ಯರಾದ ಡಾ.ಪದ್ಮಿನಿ ನಾಗರಾಜ್, ಟ್ರಸ್ಟ್ ಅಧ್ಯಕ್ಷರಾದ ಡಾ.ಸಿರಾ , ಲೇಖಕಿ ಇಂದಿರಾ ಕೃಷ್ಣಪ್ಪ ಮುಂತಾದವರಿದ್ದಾರೆ.

ವಾರ್ತಾ ಭಾರತಿ

Bengaluru Edition
Jul 26, 2022



ಬೆಂಗಳೂರಿನ ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್, ಕೇಂದ್ರ ಸಾಹಿತ್ಯ ಅಕಾಡಮಿಯ ಸಹಯೋಗದಲ್ಲಿ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಏರ್ಪಡಿಸಿದ್ದ ಮಹಿಳಾ ಸಾಂಸ್ಕೃತಿಕ ಸಮಾವೇಶವನ್ನು ಸಾಹಿತಿ ಡಾ.ಗೀತಾ ರಾಮಾನುಜಂ ಉದ್ಘಾಟಿಸಿದರು. ಈ ವೇಳೆ ಗಾಂಧಿ ಭವನದ ಅಧ್ಯಕ್ಷ, ನಾಡೋಜ ಡಾ.ವೂಡೇ ಪಿ.ಕೃಷ್ಣ, ಸಾಹಿತಿ ಕಮಲಾ ರಾಜೇಶ್, ಕೇಂದ್ರ ಸಾಹಿತ್ಯ ಅಕಾಡಮಿ ಸದಸ್ಯೆ ಡಾ.ಪದ್ಮಿನಿ ನಾಗರಾಜ್, ಟ್ರಸ್ಟ್ ಅಧ್ಯಕ್ಷ ಡಾ.ಸಿ.ಸಿರಾ, ಲೇಖಕಿ ಇಂದಿರಾ ಕೃಷ್ಣಪ್ಪ ಮತ್ತಿತರರು ಹಾಜರಿದ್ದರು.